హాగిరు ఏనందరె నింన పాపగళు నినగె మంనిసల్పడుత్తవె ఎంబ దాగి హేళిదరు। అదరె నీతిపాఠకరొళగూ ఫరిజయరొళగూ కెలబరు అల్లి కుళితుకొండిద్దు తంమల్లి యోచిసిద్దేనందరె। అవను యీ ప్రకార మాతనాడువదేను? దేవదూషణెయంను హేళుత్తానె। యారెందరె సర్వేశ్వరనొబ్బరిందలే హొర్తు పాపగళ మంనిస యారిందలాగువదు? అందుకొండిరుత్తిద్దరు। ఆగలు స్వామియవరు తమ పరమ జ్ఞానదింద యివర హృదయద యోచనెగళంను తిళిదుకొండు హేళిసిద్దేనందరె। నీవు నింమ హృదయగళల్లి కెట్ట నెనవుగళంను యోచిసువదేను నంమంను దేవదూషకరాగి యెణిసువదేను? ఈ వ్యాధిష్టన రోగవం పొందే వాక్యదింద సమస్తర ముందె నావు స్వస్థపడిసిదరె పితనాదవరు తమ కుమారన కైయ్యల్లి పాపగళ మంనిసువ అధికారవంను ఒప్పిసికొట్టిద్దారెందు యిదరిందలే అరితుకొళ్ళువిరి। ఏనందరె యీ రోగిష్టనంను పొందే వాక్యదింద గుణపడిసువదక్కింతా పాపగళ క్షమిసువదు అధిక ప్రయాసవల్ల యెంబదాగి హేళి ఆరోగిష్టన కడెగె తిరిగి నినగె ఆజ్ఞాపిసుత్తేనె యేళు నింన హాసికెయన్ను ఎత్తికొండు నింన మనెగె హోగు యెందు హేళిసిదరు ఆక్షణవే అవను సమస్తర కంణార తాను బిద్దిద్ద హాసికెయంను యెత్తికొండు సర్వేశ్వరంన మహిమె పడిసుత్తా తన మనెగె హోదను। ఆగలు జనసమూహవు అంజి విస్మయపట్టు ఈ దినదల్లి అతిశయాదిగళంను కంణార కండెవు అందరు॥

తరువాయ స్వామిగళు అల్లింద హొరటు సుంకద చావడియల్లి కుళితుకొండిరుత్తిద్ద మత్తీయాసెంబ హెసరుళ్ళ ఒబ్బ మనుష్యనంను కండరు। ఆగలు అవంన నోడి హేళిద్దేనందరె। నమగె హిందె బా యెందరు। ఆక్షణవే అవను సమస్త వడవె హిందగిగళంను బిట్టు యెద్దు అవర హిందె హోదను। ఇదల్లదె అవరిగాగి తన మనె

ಅಲ್ಲಿ ದೊಡ್ಡ ಔತನವಂನು ಮಾಡಿಸಿದನು। ಅವನ ಮನೆಯಲ್ಲಿ ಭೋಜನಕ್ಕೆ ಕುಳಿತಿರುವಾಗ ಆದದ್ದೇನಂದರೆ। ಅನೇಕ ಸುಂಕದವರೂ ಪಾಪಿಷ್ಟರೂ ಸ್ವಾಮಿಗಳೊಂದಿಗೂ ಯಿವರ ಶಿಷ್ಯರುಗಳೊಂದಿಗೂ ಭೋಜಿಸುತ್ತಿದ್ದರು। ಫರಿಜಯರೂ ನೀತಿ ಪಾಠಕರೂ ಅದಂನು ನೋಡಿ ಸ್ವಾಮಿಗಳ ಶಿಷ್ಯರ ಸಂಗಡ ಹೇಳಿದ್ದೇನಂದರೆ। ನಿಂಮ ಸ್ವಾಮಿಗಳು ಪಾಪಿಷ್ಟರೊಂದಿಗೂ ಸುಂಕದವರೊಂದಿಗೂ ಭುಜಿಸಿ ಕುಡಿಯುವದೇನು ಯೆಂಬದಾಗಿ ಕೇಳಿದರು। ಸ್ವಾಮಿಗಳು ಯೀ ವಾಕ್ಯವಂನು ಕೇಳಿ ಪಾಲಿಸಿದ್ದೇನಂದರೆ। ಆರೋಗ್ಯಸ್ತರಿಗೆ ವೈದ್ಯನು ಅವಸರವಿಲ್ಲ ರೋಗಿಷ್ಟರಿಗೆ ಮಾತ್ರ ಅವಸರವಿಧೆ ಹೀಗಿದ್ದು ಕುಷ್ಟಾ ಸೋಕುರೋಗವೂ ಯೀ ಮುಂತಾದ ಕಷ್ಟವುಳ್ಳವರ ಬಳೀಲಿ ವೈದ್ಯನು ಹೋಗಿ ಅವರ ಶರೀರಗಳಂನು ಮುಟ್ಟಿ ಅವರಿಗೆ ತಕ್ಕ ಪರಿಹರೋತ್ತಿಗಳಂನು ಮಹಾ ದಯದೊಡನೆ ಕೊಟ್ಟರೆ ಅದಂನು ನೋಡಿ ಆಕ್ಷೇಪಣೆ ಮಾಡುವವನ್ಯಾರು। ಸರ್ವರು ಅವಸ್ಥ ಯೇಕವಾಗಿ ರೋಗಳುವರಲ್ಲವೋ? ನಾವಾದರೆ ಆತ್ಮಗಳ ವೈದ್ಯರಾಗಿ ಯಿಧೇವೆ। ನೀತಿವಂತರಂನು ಅಲ್ಲ ಪಾಪಿಷ್ಟರಂನೇ ಕರೆಯಬಂದೆವು। ಯಾಕೆಂದರೆ ನೀತಿವಂತರಿಗೆ ಪಶ್ಚಾತ್ತಾಪವು ಅವಸರವಿಲ್ಲವು ಆದರೆ ಪಾಪಿಷ್ಟರಂನು ಸಕಲ ವುಪಾಯಗಳಿಂದ ಪಶ್ಚಾತ್ತಾಪಕ್ಕೆ ಕರೆಯ ಅಗತ್ಯವಾಗಿದೆ। ಹೀಗಿದ್ದು ಬಲಿಗಿಂತಾ ಕನಿಕರವಂನು ಕರ್ತರು ಅಧಿಕವಾಗಿ ಪ್ರೀತಿ ಮಾಡುತ್ತಾರೆಂಬ ದೀರ್ಘದರ್ಶಿಯಾದ ಒಜೆ ಎಂಬವರ ವಾಕ್ಯವಂನು ಜ್ಞಾಪ್ತಿಗೆ ತಂದುಕೊಂಡು ಹೋಗಿರಿ। ಈ ನ್ಯಾಯದಿಂದಲೇ ಪಾಪಿಷ್ಟರಮೇಲೆ ಕನಿಕರವಂನೂ ಕೃಪಾಕಟಾಕ್ಷವಂನೂ ತೋರಿಸಿ ಅವರ ಅವಸರಗಳಿಗೆ ಕೈಕೊಡ ಅಗತ್ಯವಾಗಿತ್ತೆಂಬದಾಗಿ ಸ್ವಾಮಿಗಳು ಪಾಲಿಸಿದರು॥

ಆಗಲು ಫರಿಜಯರು ಸ್ವಾಮಿಯವರಲ್ಲಿ ತಪ್ಪಿಲ್ಲವೆಂದು ಕಂಡು ಸ್ವಾಮಿಗಳ ಶಿಷ್ಯರ ಮೇಲಾದರೂ ದಾವದೊಂದು ತಪ್ಪು ಹೊರಿಸ ಬೇಕೆಂದು ಆಲೋಚಿಸಿದರು। ಆದಕಾರಣ ಸ್ವಾಮಿಯವರಂನು ಬೆಸಗೊಂಡು ಹೇಳಿದ್ದೇನಂದರೆ। ಜೊವಂನೇಸೆಂಬವರ ಫರಿಜಯರ ಶಿಷ್ಯರುಗಳು ವುಪವಾಸವಂನು ಮಾಡಿಕೊಂಡು ತಡಮೆ ಸಂಪ್ರದಾಯಗಳಂನು ಅನುಸರಿಸಿಕೊಂಡು

ಬರುತ್ತಾರೆ। ಆದರೆ ನಿಂಮ ಶಿಷ್ಯರು ಉಪವಾಸವಂಮ ಮಾಡದೆ ಭುಜಿಸಿ ಕುಡಿಯುವದೇನು ಅಂನಲಾಗಿ ಸ್ವಾಮಿಯವರು ಅವರ ಸಂಗಡ। ಮದಲಿಂಗನೊಂದಿಗೆ ಯಿರುವಂಥವರು ದುಃಖವಂನೂ ವುಪವಾಸವಂನೂ ಮಾಡ ಪದ್ಧತಿಯೋ? ಆದರೆ ಮದಲಿಂಗನಂನು ಬಿಟ್ಟು ತಮ ಮನೆಗಳಿಗೆ ಹೋದ ಬಳಿಕ ಅವರಿಗೆ ಅವಕಾಶ ವುಂಟಾಗಿದ್ದರೆ ಆಗ ವುಪವಾಸವಂನು ದುಃಖವಂನೂ ಮಾಡುವರು। ಇದೇಪ್ರಕಾರ ಅವತರಿಸಿದ ಸರ್ವೇಶ್ವರನ ಕುಮಾರನ ಸಂಗಡ ಅನುದಿನವು ಯಿರುವಂಥ ಶಿಷ್ಯರುಗಳು ವುಲ್ಲಾಸದಲ್ಲಿ ಯಿರುವದು ಯುಕ್ತವಲ್ಲವೇ? ಆದರೆ ನಾವು ಅವರ ಬಳಿಯಿಂದ ಯೆತ್ತಲ್ಪಟ್ಟ ತರುವಾಯ ಆಗಲು ವುಪವಾಸವಂನು ಮಾಡುವರು। ಅದಲ್ಲದೆ ವಿಶ್ವಾಸದಲ್ಲಿ ಇಂನೂ ಬಲಹೀನವಾಗಿರುವ ನಂಮ ಶಿಷ್ಯರಮೇಲೆ ಕಠಾರವಾದ ಕಟ್ಲೆಗಳ ಯಿಡಲೂ ಹೊರಿಸಲೂ ತಕ್ಕದ್ದಲ್ಲ। ಯಾಕೆಂದರೆ ಕೆಲವುಸಾರಿ ಸನ್ಮಾರ್ಗವಂನು ಬಿಟ್ಟು ಹಿಂದಿನ ಕೆಟ್ಟ ಪದ್ಧತಿಗಳಲ್ಲಿ ಪುನಃ ಬೀಳುವರು। ದಾವನು ಹಳೇ ಬಟ್ಟೆಗೆ ಹೊಸ ಬಟ್ಟೆಯ ತ್ಯಾಪೆಯಂನು ಹಾಕನು। ಹಾಕಿದರೆ ಇನ್ನು ಅಧಿಕವಾಗಿ ಹರಿದು ಹೋಗುವದು। ಮತ್ತು ಯಾವನು ಹೊಸ ರಸವಂನು ಹಳೇ ಸಿದ್ದಿಗೆಗಳಲ್ಲಿ ಹೊಯ್ಯನು? ಯಾಕೆಂದರೆ ಸಿದ್ದಿಗೆಗಳು ಒಡದು ರಸವು ಸುರಿದು ಹೋಗುವದು। ಆದರೆ ಹೊಸ ರಸವಂನು ಹೊಸ ಸಿದ್ದಿಗೆಗಳಲ್ಲಿ ಹೊಯಿದರೆ ಯೆರಡಕ್ಕೂ ನಷ್ಟವಾಗಲಾರದು। ಅದೇಪ್ರಕಾರ ನಂಮ ಶಿಷ್ಯರು ಸ್ಪಿರಿತು ಸಾಂತ್ವುವಿನ ವರಪ್ರಸಾದದಿಂದ ನೂತನ ಮನುಷ್ಯರಾಗಿ ಮಾರ್ಪಡುವಾಗ ಅವರ ಮೇಲೆ ಭಾರವಾದ ಕಲ್ಪಣೆಗಳಂನು ಹೊರಿಸುವೆವು ಆಗಲವರು ಸಂತೋಷವಾಗಿ ಅವುಗಳ ವಹಿಸಿಕೊಳ್ಳುವರು ಯೆಂಬದಾಗಿ ಪಾಲಿಸಿದರು॥



೧ ನೇದು। ಜೇಸುನಾಥರ ಶಿಷ್ಯರು ಸಮುದ್ರದ ಮೇಲೆ ತಮ್ಮ ದಿವ್ಯ ಬೋಧಕರೊಂದಿಗೆ ಪ್ರೈಣ ಸಾಗುತ್ತಿರಲಾಗಿ ಬಿರುಘಾಳಿ ಯೆದ್ದು ಸಮುದ್ರವು ಆತಲಕುತಲ ವುಂಟಾಗಿ ಯೆಲ್ಲರಿಗೂ ಪ್ರಾಣ ಸಂಕಟವಾದ ಸಮಯದಲ್ಲಿ ಅಂಥಾ ಗಂಡಾಂತರವಂನು ಇವರು ಜೇಸುನಾಥರ ಸಹಾಯದಿಂದ ತಪ್ಪಿಸಿ

ಕೊಂಡರಲ್ಲಾ। ಈ ಲೋಕದಲ್ಲಿ ನಾವು ಹಾಗೆಯೇ ಪ್ರಯಾಣಿಕರಾಗಿದ್ದೇವೆಂಥೇಳ ಬಹುದು। ಈಗಿನ ಜೀವವು ಅನೇಕ ಮೋಸವಾದ ದಿಣ್ಣೆ ಕಟ್ಟು ಬಂಡೆ ಆವರ್ತಗಳಿಂದ ತುಂಬಿದ ಸಮುದ್ರದ ಹಾಗಿದೆ। ನಾವಿರುವಂಥಾ ಹಡಗವು ತೆರೆಗಳಿಂದಲೂ ಘಾಳಿಯಿಂದಲೂ ಯೆಡೆ ಬಿಡದೆ ಹೊಡೆಯಿಲ್ಪಡುತ್ತಿದ್ದಾಗ್ಯೂ ನಿತ್ಯ ರಕ್ಷಣ್ಯವೆಂಬ ಕೆರೆಗೆ ಸೇರ ಪ್ರಯತ್ನಿಸುತ್ತದೆ। ಶರೀರದ ದುರಿಚ್ಛೆಗಳು ಗಲಿಬಿಲಿಯಾಗಿ ಏಳಲೂ ಶೋಧನೆ ತಂತ್ರ ಆಯಾಸಗಳಿಂದ ನಂಮ ಆತ್ಮಕ್ಕೆ ಪಿಶಾಚಿ ತೊಂದರೆ ಹತ್ತಿಸಲೂ ವಾಡಿಕೆಯುಂಟು ನಿಜವೇ। ಆದರೆ ದಿವ್ಯ ಜೇಸುನಾಥನು ನಂಮ ಹಡಗದಲ್ಲಿ ಯಿದ್ದರೆ ನಾವು ಭಯ ಬಡುವದು ಕೆಲಸವಿಲ್ಲ। ಸರ್ವೇಶ್ವರನು ನಂಮ ಪಾರ್ಶ್ವದಲ್ಲಿದ್ದರೆ ನಮಗೆದುರಿಗೆ ನಿಲ್ಲುವವನು ಯಾರು? ನಾವಿವರಂನು ವಿಶ್ವಾಸ ನಂಬಿಕೆಯಿಂದಲು ಪ್ರಾರ್ಥಿಸಿದರೆ ನಂಮ ಆತ್ಮದಲ್ಲಿ ಯೇಳುವಂಥಾ ಬಿರುಘಾಳಿ ಯೆಂಬ ಶೋಧನೆಗಳಂನು ಶಾಂತಿ ಪಡಿಸಿ ವ್ಯಾಕುಲವೆಂಬ ಅಲೆಗಳೊಳಗಿಂದ ನಂಮಂನು ರಕ್ಷಿಸುವರು। ಮತ್ತು ಒಂದು ಹಡಗದಲ್ಲಿ ಒಬ್ಬ ಶ್ರೇಷ್ಟ ನಾವಿಕನು ಇಲ್ಲದಿದ್ದರೆ ಹಡಗವು ಮಾರ್ಗವ ತಪ್ಪಿ ಮೋಸದಲ್ಲಿ ಶೀಘ್ರ ನಾಶನವಾಗುವದೆಂಬುವದು ನಿಜವು। ಅದೇ ಪ್ರಕಾರ ನಂಮಂನು ನಡಿಸುವದಕ್ಕಾಗಿ ಸರ್ವೇಶ್ವರನು ಜ್ಞಾನ ಗುರಿಕಾರರಂನು ದಯಪಾಲಿಸದೆ ಇದ್ದರೆ ಅಬದ್ಧ ದಾರಿಯಲ್ಲಿ ಬಿದ್ದು ಕಡೆ ಏರದೆ ಸಾಯುವೆವೆಂಬುವದು ನಿಸ್ಸಂದೇಹವಾಗಿದೆ। ಮತ್ತು ಮಾರ್ಗದಲ್ಲಿ ದೊರಕುವ ವಿಧವಿಧವಾದ ಶೃಂಗಾರ ದ್ವೀಪಾಂತ್ರ ಸೀಮೆ ತೋಪು ಈ ಮುಂತಾದವುಗಳಂನು ಸಡ್ಡೆಮಾಡದೆ ನಾವಿಕನು ತನ ಮಾರ್ಗದಲ್ಲಿಯೇ ನೆಟ್ಟಗೆ ನಡಿಯುವ ಮೇರೆಗೆ ಯೀ ಲೋಕದಲ್ಲಿ ಸಂಚರಿಸುವ ಒಬ್ಬ ಕ್ರೀಸ್ತುವನಾದವನು ಲೌಕೀಕ ಗಾಂಭೀರ್ಯ ದ್ರವ್ಯ ಸಂತೋಷಾದಿಗಳಂನು ತೃಣೀಕರಿಸಿ ತಂನ ಸೀಮೆಯಾಗಿರುವ ಪರಲೋಕದ ದಿಕ್ಕಿಗೆ ಎಡೆ ಬಿಡದೆ ನಡೆದುಕೊಂಡು ಸಾಗಬೇಕು। ಇದಲ್ಲದೆ ನಾವಿಕನು ಹಲಿಗೆಗಳೊಳಗೆ ಯಾವದೊಂದು ಸಂದು ಬೀಳಲಾಗಿ ನಾವಿಕನು ಅದಂನು ಜಾಗ್ರತೆಯಾಗಿ ಮುಚ್ಚದೆ ಇದ್ದರೆ ಸಮುದ್ರದ ನೀರು ಮೆಲ್ಲಮೆಲ್ಲಗೆ ಯೇರಿ ಕಡೆಯಲ್ಲಿ ಹಡಗವು ತುಂಬಿ ಮುಣುಗುವದಲ್ಲವೇ?

ಅದೇ ಮೇರೆಗೆ ನಂಮ ಆತ್ಮದಲ್ಲಿ ಸ್ವಲ್ಪ ಪಾಪವು ಪ್ರವೇಶಿಸುತ್ತಲೇ ಅದಂನು ನಾವು ತಳ್ಳಿಬಿಡದಿದ್ದರೆ ಮಂದಬುದ್ಧಿಯು ದಿನಂಪ್ರತಿ ಹೆಚ್ಚಿ ಕಡೆಯಲ್ಲಿ ಸಾವಾದ ಪಾಪವು ಆತ್ಮದಲ್ಲಿ ಸೇರುವದರಿಂದ ನಮಗೆ ಎಣಿಸ ಕೂಡದ ನಷ್ಟವುಂಟಾಗುವದು। ಕಡೆಯಲ್ಲಿ ಸಮುದ್ರದ ಮೇಲೆ ಅನೇಕ ದಿವಸಗಳಿದ್ದು ಬಹು ಕಷ್ಟ ಆಯಾಸ ಪಟ್ಟಂಥಾ ಪ್ರಯಾಣಿಕರು ದಡವಂನು ಕಂಡಾಗ ಬಹು ರಮ್ಯ ಸಂತೋಷವಂನು ಅನುಭವಿಸುವಪ್ರಕಾರ ಜೀವವೆಂಬ ದಿನವು ಅಸ್ತಮಿಸುವಾಗ ಸಾವು ಕಾಣೆಸಿದರೆ ನಿಜವಾದ ಕ್ರೀಸ್ತುವರಿಗೆ ಯೆಷ್ಟು ಸಂಭ್ರಮವು? ಜಗಳದ ಕಾಲವು ತೀರಿ ಹೋಯಿತೆಂದು ತಿಳಿದು ತನ ಸ್ವಂತ ಸೀಮೆಯಾಗಿರುವ ಪರಲೋಕವಂನೂ ಮನೋವಾಕ್ಕಿಗೆಟ್ಟದ ಭಾಗ್ಯವಂನೂ ಮುಂದು ಈಕ್ಷಿಸುವದರಿಂದ ಅಂಥವನಿಗೆ ಮರಣವು ಲಘುವಾಗುವದಲ್ಲದೆ ಆತನ ನಿತ್ಯಭಾಗ್ಯಕ್ಕೆ ಪ್ರಾರಂಭವಾಗಿರುತ್ತದೆ॥

೨ ನೇದು ಪಿಶಾಚಿಯು ನರಜಾತಿಗೆ ಬಹು ಕಠಾರವಾದ ಹಗೆ ಹೊಂದಿದ್ದಾಗಿ ತಂನ ಕೈವಶದಲ್ಲಿ ಬಿದ್ದಂಥವರಿಗೆ ಯೆಷ್ಟು ಉಪದ್ರ ಪಡಿಸುತ್ತದೆ ಯೆಂದು ಮೇಲೆ ಹೇಳಿದ ದೆವ್ವ ಹಿಡಿದವನ ಚರಿತ್ರೆಯಿಂದ ಗಂಡು ಕೊಳ್ಳಲಾಗುತ್ತೆ। ಹಾಗಾದರೆ ಅಂಥಾ ಯಜಮಾನನಿಗೆ ಸೇವೆ ಮಾಡುವದೇನು? ಅವನ ಕಟ್ಟಳೆಯ ಮೇರೆಗೆ ನಡೆಯುವದೇನು? ಪಿಶಾಚಿ ಯೀ ಲೋಕದಲ್ಲಿ ತಂನ ಊಳಿಗದವರಿಗೆ ಕೆಲವು ಅಲ್ಪ ಮೇಲುಗಳಂನು ಕೊಟ್ಟಾಗ್ಯೂ ಅದಂನು ಕೆಟ್ಟ ಅಭಿಪ್ರಾಯದಿಂದ ಮಾಡುತ್ತದೆ ಹೊರತು ಇತರವಲ್ಲ। ಯೇನಂದರೆ ಮನುಮಕ್ಕಳು ಲೌಕೀಕ ಭಾಗ್ಯಕ್ಕೆ ತಂಮಂನೊಪ್ಪಿಸಿ ಅನೇಕ ಪಾಪಗಳಲ್ಲಿ ಬಿದ್ದು ಅಧಿಕ ಅಪರಾಧಸ್ತರಾಗುತ್ತಾರೆಂದೂ ಆ ಬಳಿಕ ಮನಸ್ಸು ಬಂದಹಾಗೆ ಅವರಂನು ನರಕದಲ್ಲಿ ಬಾಧಿಸ ಬಹುದೆಂದೂ ಪಿಶಾಚಿಯು ಯೋಚಿಸಿಕೊಳ್ಳುತ್ತದೆ। ಆಗಲು ಅದರ ಕೈಯೊಳಗಿಂದ ಯೊಬ್ಬನಾದರೂ ನಂಮಂನು ಬಿಡಿಸಿ ರಕ್ಷಿಸಲಾರನು। ಇಹದಲ್ಲಿ ಸರ್ವೇಶ್ವರನು ಅಪ್ಪಣೆ ಕೊಡುವಷ್ಟು ಮಾತ್ರ ಪಿಶಾಚಿಯು ನಂಮಂನು ಬಾಧಿಸ ಬಹುದು। ಆದರೆ ದೇವರು ವುತ್ತಮ ತಂದೆಯಾಗಿರುವದರಿಂದ ಹೆಚ್ಚಾದ ಶೋಧನೆಗೆ ಯೊಂದುಕಾಲಕ್ಕಾದರೂ ನಂಮಂನು ಒಪ್ಪಿಸಿ ಬಿಡದೆ ಪಿಶಾಚಿಯಂನು ಜಯಿ

ಸುವದಕ್ಕೆ ಬೇಕಾದ ತ್ರಾಣೆ ಅನುಗ್ರಹವನ್ನು ನಮಗೆ ಪಾಲಿಸುತ್ತಾನೆಂಬುವದು ಯಥಾರ್ಥ। ಹೀಗಿದ್ದು ಪಿಶಾಚಿಯು ನಮಗೆಷ್ಟು ಬಾಧೆ ಉಪದ್ರ ತಂತ್ರಾದಿಗಳನ್ನು ಹುಟ್ಟಿಸಿದ್ದಾಗ್ಯೂ ಯಾವ್ಯಾವ ಉಪಾಯಗಳ ಬಳಸಿದ್ದಾಗ್ಯೂ ನಾವದಕ್ಕೆ ಒಪ್ಪಿಕೊಂಡರೆ ಹೊರ್ತು ನಮ್ಮನ್ನು ಪಾಪದೊಳಗೆ ಬೀಳಲಿಸಲಾರದೆಂದೂ ಮತ್ತು ಪೌಲ್ಲೇ ಕ್ರೀಸ್ತುವನು ಜ್ಞಾನ ಆಯುಧಗಳ ಪ್ರಯೋಗಿಸಿದ್ದರಿಂದಲೂ ಸರ್ವೇಶ್ವರನ ಮೇಲೆ ನಂಬಿಕೆಯಾಗಿರುವದರಿಂದಲೂ ಅದನ್ನು ಮೇಲ್ಗೊಳ್ಳುವನೆಂದೂ ಅರಿತು ಕೊಳ್ಳುವವಾಗಲಿ॥

೩ ನೋಡು। ನಮ್ಮ ದಿವ್ಯ ರಕ್ಷಕರು ಪಾಪಿಗಳಿಗಾಗಿ ಬಹಳ ದಯ ಅಂತಃಕರಣೆಯನ್ನು ಹೊಂದಿದವರಾಗಿದ್ದರು। ಈ ನಿಮಿತ್ತ ಅವರಿಗೆ ವಿರೋಧವಾಗಿದ್ದ ಗರ್ವಿಷ್ಟರಾದ ಫರಿಸಾಯರು ಅವರನ್ನು ಕುರಿತು ಹೇಳುತ್ತಿದ್ದದ್ದೇನಂದರೆ। ಅಂಥವನು ಪಾಪಿಷ್ಟರ ಸ್ನೇಹಿತನು। ಯಾಕೆಂದರೆ ಅವರೊಂದಿಗೆ ಊಟ ಮಾಡಲಂಜುವದಿಲ್ಲವೆಂಥೇಳಿ ಗುಣಗುಟ್ಟುತ್ತಾ ಇದ್ದರು। ನಮ್ಮ ದಿವ್ಯ ಬೋಧಕರು ಅದನ್ನು ಒಪ್ಪಿಕೊಂಡು ಬಂದದ್ದಲ್ಲದೆ ತಾವು ಪಾಪಿಷ್ಟರನ್ನು ವಿಶೇಷವಾಗಿ ರಕ್ಷಿಸ ಬೇಕೆಂಬ ಅಭಿಲಾಷೆಯಿಂದ ಈ ಭೂಮಿಯ ಮೇಲೆ ಬಂದಿದ್ದೇವೆಂದೂ ಆತ್ಮಗಳ ಜ್ಞಾನ ವೈದ್ಯನು ನಾವೇಯೆಂದೂ ಸಕಲರ ಮುಂದೆ ಅರುಹಿಸುತ್ತಾ ಬಂದರು। ಓ ಪಾಪಿಗಳಾದವರೇ ನಿಮ್ಮ ಸ್ನೇಹಕ್ಕೆ ಇಷ್ಟ ಪಾತ್ರರಾದ ದೇವರನ್ನು ನೀವು ಸ್ನೇಹಿಸದೆ ಇರ ಬಹುದೋ। ಅನುದಿನವೂ ನೀವು ಇವರನ್ನು ಅನೇಕ ಘನವಾದ ಪಾಪಗಳಿಂದ ದ್ರೋಹವ ಮಾಡ ನ್ಯಾಯವೋ? ಆದರೂ ಅರ್ಚಃ ಮತ್ತೆಯುಸೆಂಬವರು ಮಾಡಿದ ಪ್ರಕಾರ ನೀವು ಪಾಪದ ಮಾರ್ಗವನ್ನು ತೀವ್ರವಾಗಿ ವರ್ಜಿಸಿ ಪಾಪಕ್ಕೆ ಹೇತುವಿಯಾದ ವ್ಯಾಪಾರ ಸಮಯಗಳನ್ನು ತಳ್ಳಿಬಿಟ್ಟರೆ ಅವರ ಹಾಗೆ ನಿತ್ಯ ಜೀವದ ಪಂಕ್ತಿಯಲ್ಲಿ ಜೇಸುನಾಥರೊಂದಿಗೆ ಕುಳಿತು ಅನಂತ ಭಾಗ್ಯವನ್ನು ಹೊಂದುವಿರಷ್ಟೆ॥



## ೯ ನೇ ಅಧ್ಯಾಯವು॥



### ಜೇಸುನಾಥರು ಮಾಡಿದ ಬೇರೆ ವೃತ್ತಾಂತಗಳ ಕುರಿತು॥



ಸಿನಗೋಗಿನ ಯಜಮಾನನಾದ ಜಯಿರೂಸೆಂಬ ಒಬ್ಬ ಮನುಷ್ಯನಿದ್ದನು। ಅವನು ಸ್ವಾಮಿಗಳ ಸಂನಿಧಾನಕ್ಕೆ ಬಂದು ಅವರ ಶ್ರೀಪಾದಗಳಮೇಲೆ ಬಿದ್ದು ಬಿಂನವಿಸಿದ್ದೇನಂದರೆ। ಸ್ವಾಮೀ ಸುಮಾರು ಹಂನೆರಡು ವರುಷ ಪ್ರಾಯದವಳಾಗಿರುವ ನಂನ ಮಗಳು ಬಹು ವ್ಯಾಧಿಷ್ಟಳಾಗಿದ್ಧಾಳೆ। ನೀವು ವಿಜಯಂಗೈದು ಆಕೆಯ ಮೇಲೆ ನಿಂಮ ಹಸ್ತವಂನು ನೀಡಿದರೆ ಬದುಕುವಳು ಯೆಂದು ಪ್ರಾರ್ಥಿಸಿದನು। ಆಗಲು ಸ್ವಾಮಿಯವರು ಯೆದ್ದು ತಂಮ ಶಿಷ್ಯರ ಸಂಗಾಡ ಅವನ ಹಿಂದೆ ಹೋಗುತ್ತಿದ್ದರು॥

ಮತ್ತು ಸ್ವಾಮಿಗಳು ಹೊರಟು ಹೋಗಲಾಗಿ ಜನ ಸಮೂಹವು ಅವರಂನು ಇರಿಕಿಸುವದಾಗಾಯಿತು। ಆಗಲು ಹಂನೆರಡು ವರುಷಗಳಿಂದ ರಕ್ತಪ್ರವಾಹ ರೋಗದಲ್ಲಿ ಬಿದ್ದಿದ್ದ ಸ್ತ್ರೀಯೊಬ್ಬಳು ಬಹು ಸಂಕಟ ಅನುಭವಿಸುತ್ತಿದ್ದು ತಂನಂನೂ ಅನೇಕ ವೈದ್ಯರಿಗೆ ತೋರಿಸಿ ಎಷ್ಟೋ ಖರ್ಚು ಮಾಡಿದ್ದಾಗ್ಯೂ ಅದರಿಂದ ಒಂದು ಪ್ರಯೋಜನವಾಗದೆ ಇಂನು ರೋಗವು ಹೆಚ್ಚು ಹೆಚ್ಚಾಗುತ್ತಿತ್ತು। ಹೀಗಿರಲಾಗಿ ಸ್ವಾಮಿಗಳು ಆ ಮಾರ್ಗವಾಗಿ ಹಾದು ಹೋಗುತ್ತಾರೆಂಬ ವರ್ತಮಾನವಂನು ಆಕೆಯು ಕೇಳಲಾಗಿ ಆ ಜನ ಸಮೂಹದೊಳಗೆ ತೂರಿ ಸ್ವಾಮಿಗಳ ಹಿಂದು ಕಡೆಗೆ ಬಂದು ಅವರ ಧರಿಸು ವಸ್ತ್ರಗಳ ತೆರಗಂನು ಮುಟ್ಟಿ ತಂನೊಳಗೆಂದುಕೊಂಡದ್ದೇನಂದರೆ। ನಾನು ಇವರ ವಸ್ತ್ರಗಳಂನು ಮಾತ್ರ ಮುಟ್ಟಿದರೆ ಸ್ವಸ್ಥಾಪಡುವೆನಂದುಕೊಂಡಳು। ಆ ಕ್ಷಣವೇ ಆಕೆಯ ರಕ್ತಪ್ರವಾಹವು ನಿಂತು ತನಗೆ ಗುಣವಾಯಿತೆಂದು ತಂನೊಳು ತಿಳಿದುಕೊಂಡಳು। ಆಗಲು ತಂಮೊಳಗಿಂದ ಒಂದು ವರವು ಹೊರಟಿತೆಂತ ಸ್ವಾಮಿಗಳು ತಿಳುಕೊಂಡು ಪಾಲಿಸಿದ್ದೇನಂದರೆ। ನಂಮ

వస్త్రగళ ముట్టిదవర్యారు? ఎందు కేళలాగి రామప్పనూ ఇవ
నొందిగె యిద్దంథవరూ ప్రత్యుత్తరవాగి। బోధకరే జన సందణి
నింమంను యిరికిసుత్తిరువాగ నంమంను ముట్టిదవర్యారెందు కేళు
త్తీరి అంగరు; అదక్కె స్వామిగళు ప్రత్యుత్తరవాగి। యావనొబ్బను
నంమంను ముట్టిదను యాకెందరె నంమొళగింద ప్రభావవు హొర
టితెందు నావు బల్లెవు యెంథేలి యిదంను మాడిదంథవళంను
గొత్తుమాడె సుత్తుముత్తు దృష్టిసుత్తిద్దరు। లోకద దివ్యరక్షకరు
తంమ అళవడిస కూడద జ్ఞానదంద ఆకెయంను యథార్థవాగి
తిళిదు కొండద్దు నిజ। ఆదరూ ఆశ్చర్యవాగి గుణపట్ట స్త్రీయ్యా
దవళు సచ్చర కంణార సాక్షియంను కొడువదాగె ఈ ప్రకార
కేళుత్తిద్దరు। ఆగలు ఆకెయు తాను బయిలాదళెంత కండు భయ
భ్రాంతళాగి స్వామియవర పాదగళిగె సాష్టాంగవాగి బిద్దు సమస్త
జనర ముంచె వుంటాదద్దంను ప్రత్యక్షమాడి తాను హ్యాగె తక్ష
ణవే గుణపట్టళెందు తిళియపడిసిదళు। ఆగ స్వామిగళు ఆకెయ
కడెగె తిరిగి నోడి పాలిసిద్దేనందరె। మగళే నంబికెయాగిరు।
నింన విశ్వాసవు నింనంను స్వస్థ పడిసితు। సమాధానదల్లి హోగు
నింన రోగదింద స్వస్థవాగిరు యెందు పాలిసిదరు॥

ఆదరె స్వామిగళు యింను మాతనాడుత్తిరలాగి వొబ్బను
జయిరూసెంబవన బళిగె బందు హేళిద్దేనందరె। నింమ మగళు
తీరి హోదళు। నీవు స్వామిగళంను తొందరెపడిసువదు యాతక్కె
యెందను। ఆగలు స్వామిగళ మేలె బర బర విశ్వాసవుళ్ళవనాద
జయిరూసెంబవను అవరంను మత్తొందావర్తి ప్రార్థిసి హేళిద్దే
నందరె। స్వామీ నంన మగళు యీగలే కాలవాదళు। ఆదరూ
తావు విజయవంగ్యెదు ఆకెయ మేలె నింమ తిరుహస్తవంను నీడి
దరె బదుకువళు ఎందను। అదక్కె స్వామిగళు ప్రత్యుత్తరవాగి భయ
పడబ్యాడ నీను విశ్వాసవాగిద్దరె సాకు నింన మగళు స్వస్థపడు

వళు యెందు హేళిసిదరు। హీగిద్దు స్వామిగళు జయిరాసెంబవన మనెగె చిత్తైసుత్తిరలాగి తమ సంగడ రామప్పనూ జాకోబనూ జోవంనేసనూ ఆ హుడిగియ తందెతాయిగళూ వినాయిసి దావను ఒళగె ప్రవేశిసువదక్కె అప్పణె హేళిసలిల్ల। ఆదరె అల్లి మేళ గారరంనూ మత్తు అళుత్తా ఇద్ద జన సందడియన్నూ స్వామిగళు నోడి హొళగె ప్రవేశిసి నీవు గాత్రి పట్టు గోళాడువ దేను? ఇల్లింద హొరటు హోగిరి యేనంగరె ఆ చిక్కవళు సాయ లిల్ల నిద్రిసుత్తాళె యెందు హేళిసిదరు। ఇదక్కె అర్థవేనందరె ఇష్టు హొత్తు నింత మరణవు స్వప్నవెందు ఎణిసల్పడ బహుదా గిత్తు। ఆదరె జన సమూహవు ఆ చిక్కవళు సత్తుహోదళెంత తిళిదు స్వామిగళంను హాస్య మాడుత్తిద్దరు। ఆగలు యోగరక్షకరు ఆ చిక్కవళిద్ద స్థళక్కె ప్రవేశిసి ఆకెయ కైయంను హిడిదు కూగి హేళిద్దేనందరె। చిక్కవళే నినగె ఆజ్ఞాపిసుత్తేనె యేళు అంత లాగి తక్షణవే ఆకెయ ఆత్మవు అవళల్లి పునర్బంతు। ఆగలే అవళు యెద్దు తిరుగాడుత్తా యిద్దళు। అదన్ను అవళ తందె తాయి గళు కండు బహు విస్మితరాదరు। ఆదరె స్వామిగళు అవరంన నోడి ఆ సంధ సంగతియంను యారిగూ హేళదహాగె ఖండితవాగి ఆజ్ఞా పిసిదరు। ఏనందరె స్వామిగళు తంమ సుమారైకెయింద మనదైన్య వన్నూ లౌకిక మహిమెయ మేలె హేసికెయంనూ తంమ అపో స్తలరిగె హాత్తైస వృద్ధిసుత్తిద్దరు। ఆదరూ ఈ సంగతియు ఆ రాజ్యాద్యంతదల్లి ప్రకటవాయితు॥

మత్తు స్వామిగళు అల్లింద హొరటు హోగలాగి కురుడరిబ్బరు అవరిగె హిందె బందు కూగి హేళిద్దు। దావీదెంబవర కొమా రనే నంమ మేలె అంతఃకరుణవాగిద్దు నమగె దృష్టియంను దయ పాలిసీ యెందేళుత్తిద్దరు। ఆగలు స్వామిగళు అవర సంగడ। యిదు నంమింద ఆహేతెందు విశ్వాసిసుత్తీరో? అంనలాగి అవరు హౌదు

కర్తనే యెందు హేళిదరు। ఆగ స్వామిగళు అవర కంణుగళంను ముట్టి నింమ విశ్వాసద ప్రకార నిమగుంటాగలి యెందు హాలిసిదరు। మత్తు అవర కంణుగళు తెరెయల్పట్టవు ఆదరె స్వామిగళు అవరంను గద్దిసి యిదు యావనిగు తిళియబారదహాగె యెచ్చరికెయాగిరి యెందు హాలిసిదరు। అవరో మేలరిత మనస్సువుళ్ళవరాగిద్ద కారణ స్వామిగళ కీర్తియంను యెల్లెల్లియు ప్రసిద్ధవాగ మాడిదరు॥

తరువాయ స్వల్ప కాలక్కాగి స్వామిగళు గలిలేయ సీమెయంను బిట్టు హబ్బోత్సవవంను కొండాడువదక్కె జెరుసలేమిగె విజయ వంగైదరు। ఆదరె జెరుసలేమినల్లి ఐదు మంటపగళుళ్ళ వొందు కొళవిత్తు। ఆ మంటపగళల్లి వ్యాధిష్టర కురుడర కుంటర మొదలాద రోగిష్టర సమూహవు ఇరుత్తిత్తు। యాకెందరె తక్క కాలదల్లి కర్తరాదవర దూతను యిళిదు బందు ఆ జలగళంను కదలిసుత్తాయిద్దరు। ఆ జలగళు కదలిద బళిక యావను మొదలు ఆ కొళదల్లి యిళిదిరువనో అంథవను ఎంథా రోగిష్టనాగలి స్వస్థపడుత్తిద్దను హీగిద్దు మూవత్తెంటు వరుషగళ తొడగి రోగిష్టనాగిద్దంథ ఒబ్బ మనుష్యను అల్లి బిద్దిద్దను। ఆగ స్వామిగళు అవను బిద్దిరువదంనోడలాగి అవన్న చెసగొండు నినగె ఆరోగ్యవాగ మనస్సో! ఎందు కేళిదరు। అదక్కవను ప్రత్యుత్తరవాగి స్వామీ ఈ జలగళు కదలల్పడువాగలే నంనంను యెత్తి ఈ కొళదల్లి ఇళిసువవను వొబ్బను యిల్లవు। ఆదరూ నాను యిదరల్లి సేరువదరొళగె ననగె ముంచె యింనొబ్బను యిళియువనెందను। ఆగ స్వామిగళు అవన్న నోడి ఏళు నింన హాసికెయన్న ఎత్తికొండు నడి యెందు హాలిసుత్తలే ఆ మనుష్యను గుణపట్టను। మత్తు తంన హాసికెయంను ఎత్తికొండు హోగుత్తిద్దను। ఆదరె ఆ దివసవు సబ్బాతు దివసవాగిత్తు। ఆద్దరింద గుణపట్టవన సంగడ యూదెయరు ఈ దివసవు సబ్బాతు

ದಿವಸವೇ ಆದಕಾರಣ ನಿಂನ ಹಾಸಿಕೆಯನ್ನು ಯೆತ್ತಿಕೊಂಡ್ಹೋಗ ನಿನಗೆ ಅಪ್ಪಣೆ ಯಿಲ್ಲವೆಂದರು । ಅದಕ್ಕವನು ಪ್ರತ್ಯುತ್ತರವಾಗಿ ನನಗೆ ಸ್ವಸ್ಥವನ್ನು ದಯ ಪಾಲಿಸಿದಂಥವರು ನನಗೆ ಈ ಅಪ್ಪಣೆಯನ್ನು ಕೊಟ್ಟರು ಯೆಂದನು। ಅದಕ್ಕೆ ಜ್ಯೂದೆಯರು ಆ ಮನುಷ್ಯನು ಯಾರೆಂದು ಕೇಳಿದರು। ಆದರೆ ಗುಣಪಟ್ಟಂಥಾ ಮನುಷ್ಯನು ಸ್ವಾಮಿಗಳು ಯಾರೆಂದು ಅರಿಯದವನಾಗಿದ್ದನು। ಯಾಕೆಂದರೆ ಸ್ವಾಮಿಗಳು ಈ ಅದ್ಭುತ ಮಾಡಿದಲ್ಲೇ ಜನಸಂದಡಿಯಿಂದ ತೊಲಗಿ ಹೋದರು। ಅದರ ತರುವಾಯ ಅವನನ್ನು ಸ್ವಾಮಿಗಳು ದೇವಸ್ಥಾನದಲ್ಲಿ ಕಂಡು ಅವನ ಸಂಗಡ ಹೇಳಿದ್ದೇನಂದರೆ। ಇಗೋ ಆರೋಗ್ಯಸ್ತನಾದಿಯೇ ಆದರೆ ನಿನಗೆ ಅಧಿಕ ಕೇಡು ಸಂಭವಿಸದಹಾಗೆ ಇನ್ನುಮೇಲೆ ಪಾಪವನ್ನು ಕಟ್ಟಿಕೊಳ್ಳ ಬ್ಯಾಡವೆಂತ ಅವನಿಗೆ ಯೆಚ್ಚರಿಸಿದರು। ಆಗಲು ಆ ಮನುಷ್ಯನು ಜ್ಯೂದೆಯರ ಬಳಿಗೆ ಹೋಗಿ ತನಗೆ ಗುಣ ಮಾಡಿದಂಥವರು ಜೇಸುನಾಥರೇ ಯೆಂದು ಅರುಹಿಸಿದನು। ಇದರ ನಿಮಿತ್ತ ಸಬ್ಬಾತು ದಿವಸದಲ್ಲಿ ಸ್ವಾಮಿಗಳು ಯಿಂಥವುಗಳನ್ನು ಮಾಡುತ್ತಾರೆಂಬುವದರಿಂದ ಜ್ಯೂದೆಯರು ಅವರಿಗೆ ಹಿಂಸೆ ಪಡಿಸುತ್ತಿದ್ದರು॥

ಮತ್ತೂ ಇಂನೊಂದು ಸಮಯದಲ್ಲಿ ಯಿದೇ ತಪ್ಪನ್ನು ಅವರ ಮೇಲೆ ತಿರಿಗಿ ಹೊರಿಸಿದರು ಅದು ಹ್ಯಾಗಂದರೆ। ಸ್ವಾಮಿಗಳು ತಂಮ ಶಿಷ್ಯರ ಸಂಗಡ ಸಬ್ಬಾತು ದಿವಸದಲ್ಲಿ ಬೆಳೆಯಾಗಿದ್ದ ಹೊಲಗಳಲ್ಲಿ ಹಾದು ಹೋಗುತ್ತಿರಲಾಗಿ ಅವರ ಶಿಷ್ಯರು ಹಸ್ತು ತೆನೆಗಳನ್ನು ಕಿತ್ತು ಕೈಯ್ಯಗಳಲ್ಲಿ ಉಜ್ಜಿ ಭಕ್ಷಿಸುತ್ತಾ ಹೋಗುತ್ತಿದ್ದರು। ಯಾಕೆಂದರೆ ಸರ್ವೇಶ್ವರನು ತಾವೇ ಇಂಥಾ ಅಪ್ಪಣೆಯನ್ನು ಮೋಯಿಜೆಸೆಂಬವರ ವೇದದಲ್ಲಿ ಪಾಲಿಸಿದರು। ಆದಾಗ್ಯೂ ಫರಿಜಯರು ಸ್ವಾಮಿಗಳ ಸಂಗಡ। ಬೋಧಕರೇ ಸಬ್ಬಾತು ದಿನದಲ್ಲಿ ಅಪ್ಪಣೆ ಯಿಲ್ಲದಂಥಾದ್ದು ನಿಂಮ ಶಿಷ್ಯರು ಮಾಡುವದೇನು ? ಅಂನಲಾಗಿ ಸ್ವಾಮಿಗಳು ಅವರ ಸಂಗಡ ಹೇಳಿದ್ದೇನಂದರೆ। ದಾವೀದನೂ ಅವನೊಂದಿಗೆ ಯಿದ್ದಂಥವರೂ ಹಸ್ತು ಇದ್ದಾಗ ಸರ್ವೇಶ್ವರನ ಮಂದಿರದೊಳಗೆ ಪ್ರವೇಶಿಸಿ ಗುರುಗಳು ವಿನಾಯಿಸಿ ಮತ್ತ್ಯಾವರಿಗೆ ಭಕ್ಷಿಸ ಅಪ್ಪಣೆ ಯಿಲ್ಲದಂಥಾ ತಿರು ರೊಟ್ಟಿಗಳಂನು ತೆಗದುಕೊಂಡು ಭೋಜಿಸಿದರೆಂತ

నీవు వోదలిల్లవే? ఆదరూ అదంను మహా అవసరదింద మాడిద కారణ అదు అవరిగె పాపవాగలిల్లవల్లా। ఇదల్లదె సబ్బాతు దివసదల్లి అర్చకరు బలిగళంను ఒప్పిసుత్తా పాడెగళంను అడకుత్తారల్లా। ఆద్దరింద దేవ మందిరదల్లే సబ్బాతు దివసవంను మీరుత్తారె। ఆదాగ్యూ దేవ భజనెయ నిమిత్యార్థవాగి అవుగళంను మాడుత్తారెంబువదరింద తప్పిల్లదవరాగిద్దారె ఇదే ప్రకార నంమ శిష్యరు తంమ దివ్య గురుగళ సంగడ ప్రయాణ మాడుత్తా అవరిగె సేవిసలాగి అవసరదింద సబ్బాతు దినవంను మీరిద్దు తప్పు అల్లవల్లా। యాకెందరె సర్వేశ్వరన కుమారను దేవాలయక్కింతలూ సబ్బాతు దివసక్కింతలూ శ్రేష్టవాగిద్దారెంత పాలిసిదరు॥

బేరొందు సబ్బాతు దినదల్లి స్వామిగళు శినగోగవంను ప్రవేశిసి దేవ వాక్యవంను ప్రసంగిసువాగ సంభవిసిద్దేనందరె। బణక్కెయ్యుళ్ళ ఒబ్బ మనుష్యను అల్లి ఇద్దను। ఆదరె నీతి పాఠకరూ ఫరిజనురూ సబ్బాతు దినదల్లి స్వామిగళు స్వస్థ పాలిసిదరె అవర మేలె తప్పు హొరిస బేకెందు హొంచి నోడుత్తిద్దరు। ఆగలివరన్ను బెసగొండు సబ్బాతు దివసదల్లి స్వస్థ పడిసలప్పణె వుంటో ఎంబదాగి కేళిదరు। అదక్కె ప్రత్యుత్తర కొడలే ఇల్ల।ఆగ స్వామియవరు అవర తృష్ట నెనవుగళన్ను తిళిదు రోగిష్టనిగె। ఏళు మధ్యదల్లి నిల్లు ఎందరు మత్తు అవను ఎద్దు నింతను। ఆగలు స్వామిగళు అవర సంగడ నావు నిమగొందు మాతన్ను కేళుత్తేవె ఏనందరె। సబ్బాతు దివసదల్లి మేలూ అల్లవే కేడూ మాడలప్పణె వుంటో? మనుష్యన జీవ రక్షిసలూ అల్లవే కెడిసలూ అప్పణె వుంటో? నింమొళగె యావనొబ్బనిగొందు పశువిద్దు సబ్బాతు దివసదల్లి అదు కుళ్ళదల్లి బిద్దరె ఆ క్షణవే అదన్ను యెత్తదె బిడువనో? ఆదరె మనుష్యను పశువిగింతా ఎష్టు బెలెయుళ్ళవనాగిద్దానె। హాగాదరె సబ్బాతు దివసదల్లి మేలు మాడ అప్పణె వుంటు యెందరు। అదక్కె ఫరిజ

ಯರೂ ನೀತಿ ಪಾಠಕರೂ ಬಾಯಿ ಮುಚ್ಚಲಾಗಿ ಸ್ವಾಮಿಗಳು ಅವರ ಹೃದಯದ ಕಠಿಣತ್ವದ ಮೇಲೆ ದುಃಖಿತರಾಗಿ ಅವರಂನು ಕೋಪದೊಂದಿಗೆ ದೃಷ್ಟಿಸಿ ಒಂದು ವಾಕ್ಯವಂನಾದರೂ ಅವರ ಸಂಗಡ ಹೇಳದೆ ಆ ವ್ಯಾಧಿಷ್ಟನ ಕಡೆಗೆ ತಿರಿಗಿ ನಿಂನ ಕೈಯ್ಯಂನು ನೀಡು ಯೆಂದು ಪಾಲಿಸಿದರು। ಅವನು ತನ ಕೈಯ್ಯಂನು ನೀಡಿದನು। ಮತ್ತು ಎಡಗೈಯ್ಯಿಹಾಗೆ ಬಲಗೈಯ್ಯಿ ಸ್ವಸ್ಥವಾಯಿತು। ಆಗಲು ಸ್ವಾಮಿಯವರು ಆ ವ್ಯಾಧಿಷ್ಟನ ಗುಣಪಡಿಸಿದಲ್ಲಿ ವೇದಕ್ಕೆ ವಿರೋಧವಾಗಿ ಯೇನೊಂದು ಮಾಡಲಿಲ್ಲವೆಂದು ಫರಿಜಯರು ಕಂಡು ಮಹಾ ದ್ವೇಷಿತರಾಗಿ ಅಲ್ಲಿಂದ ಹೊರಟು ಹ್ಯಾಗಾದರು ಅವರ ಹತ ಮಾಡ ಬೇಕೆಂಬ ಆಲೋಚನೆ ಮಾಡುತ್ತಿದ್ದರು। ಆದರೆ ಸ್ವಾಮಿಗಳು ಅದಂನು ತಿಳಿದು ತಂಮ ಶಿಷ್ಯರುಗಳ ಸಂಗಡ ಸಮುದ್ರದ ಬಳಿಗೆ ಬಂದರು॥

ತರುವಾಯ ಆದದ್ದೇನಂದರೆ। ಸ್ವಾಮಿಗಳು ಯೇಕಾಂತ್ತವಾಗಿ ಒಂದು ಪರ್ವತಕ್ಕೆ ಹೋಗಿ ಅಲ್ಲಿ ದೇವರಂನು ಪ್ರಾರ್ಥಿಸುವದರಲ್ಲಿ ರಾತ್ರೀಕಾಲವಂನು ಕಳಿಯುತ್ತಾ ಇದ್ದರು। ಆದರೆ ಉದಯವಾದಾಗ ತಾವೇ ಯಿಚ್ಛೈಸಿದವರಂನು ಕರೆದರು। ಇವರು ತಂಮ ಬಳೀಲಿ ಬಂದರು। ತಂಮ ಸಂಗಡ ಯಿರುವದಕ್ಕೂ ಜನರಿಗೆ ದೇವ ವಾಕ್ಯವಂನು ಪ್ರಸಂಗಿಸುವದಕ್ಕೂ ತಮ್ಮ ಶಿಷ್ಯರೊಳಗಿಂದ ಹಂನೆರಡು ಮಂದಿಯಂನು ಆರಿಸಿ ತೆಗದುಕೊಂಡು ಕಳುಹಿಸಲ್ಪಟ್ಟವರು ಅರ್ಥವಾಗಿ ಅಪೋಸ್ತಲರೆಂಬ ನಾಮವಂನು ಅವರಿಗೆ ಯಿಟ್ಟರು। ಅಪೋಸ್ತಲರ ಹೆಸರುಗಳು ಯಾವವೆಂದರೆ। ರಾಯಪ್ಪನೆಂಬ ಹೆಸರುಗೊಂಡ ಶಿಮೋನನೂ ಜೆಬೆದೆಯನ ಮಕ್ಕಳಾದ ಜಾಕೋಬ್ ಜೋವಂನೇಸೆಂಬವರೂ। ಆಂದ್ರೆಯಾಸನೂ। ಫಿಲಿಪ್ಪನೂ। ಬರ್ತೊಲೊಮೆಯಾಸೆಂಬವನೂ। ಸುಂಕದವನಾದ ಮತ್ತೆಯಾಸೆಂಬವನೂ। ತೋಮಾಸೆಂಬವನೂ। ಅಲ್ಪೆಯನ ಮಕ್ಕಳಿಬ್ಬರಾದ ಜಾಕೋಬನೂ ಅವನ ಸಹೋದರನಾದ ಜೂದಾಸೆಂಬವನೂ। ಕನನೆಯನಾದ ಶಿಮೋನನೂ। ಸ್ವಾಮಿಗಳಿಗೆ ದ್ರೋಹಿ ಆದ ಜೂದಾಸ್ ಇಸ್ಕಾರಿಯೊತೆಸೆಂಬವನೂ। ಇವರೇಸರಿ॥

ಒಂದಾನೊಂದು ದಿವಸದಲ್ಲಿ ಹೇರಳವಾದ ಜನರು ಸ್ವಾಮಿಗಳ

ಹಿಂದೆ ಬರಲಾಗಿ ಯಿಗೋ ವೊಬ್ಬ ಕುಷ್ಟನು ಕರ್ತರ ಸಂನಿಧಾನಕ್ಕೆ ಬಂದು ಅವರ ಮುಂದೆ ಸಾಷ್ಟಾಂಗವಾಗಿ ಬಿದ್ದು ಸ್ವಾಮೀ ನಿಮಗೆ ಚಿತ್ತವಿದ್ದರೆ ನಂನಂನು ಸ್ವಸ್ಥಾ ಪಡಿಸ ಬಹುದು ಎಂದು ಬಿಂನಹಿಸಿದನು। ಆಗಲು ಸ್ವಾಮಿಯವರು ಆತನ ಮೇಲೆ ಮನ ಮರುಗಿ ತಂಮ ತಿರು ಹಸ್ತವಂನು ನೀಡಿ ಅವಂನ ಮುಟ್ಟಿ ಹೇಳಿದ್ದು। ನಮಗೆ ಚಿತ್ತವುಂಟು ಸ್ವಸ್ಥವಾಗಿರು ಯೆಂಬದಾಗಿ ಪಾಲಿಸುತ್ತಲೇ ಅವನಿಗುಂಟಾಗಿದ್ದ ಕುಷ್ಟವು ಬಿಟ್ಟೇ ಹೋಯಿತು। ಆದರೆ ಸ್ವಾಮಿ ಅವಂನ ಕಳುಹಿಸಲಾಗಿ ಅವನಿಗೆ ವಿಧಿಸಿದ್ದೇನಂದರೆ ಯೀ ಸಂಗತಿಯಂನು ಒಬ್ಬನಿಗಾದರು ತಿಳುಹಿಸದಂತೆ ನೋಡಿಕೊ। ಆದಾಗ್ಯೂ ದೇವ ಕಲ್ಪಣೆಯ ಪ್ರಕಾರ ನೀನು ಹೋಗಿ ನಿಂನಂನು ಗುರುಗಳಿಗೆ ತೋರಿಸು ಮತ್ತು ನಿಂನ ಆರೋಗ್ಯಕ್ಕೆ ಸಾಕ್ಷಿಯಾಗಿ ಮೊಯಿಸೆಸೆಂಬವನು ಆಜ್ಞಾಪಿಸಿದಂಥ ಕಾಣಿಕೆಗಳಂನು ವೊಪ್ಪಿಸಿ ಕೊಡು ಯೆಂದು ಪಾಲಿಸಿದರು। ಆಗ ಅವನು ಹೊರಟು ಲೋಕದ ರಕ್ಷಕರು ತನಗೆ ಕರುಣಿಸಿದಂಥ ದಯವಂನು ಪ್ರಸಿದ್ಧ ಮಾಡ ತೊಡಗಿದನು।ಆದಕಾರಣ ಸ್ವಾಮಿಗಳು ಪಟ್ಟಣಗಳಲ್ಲಿ ಪ್ರತ್ಯಕ್ಷವಾಗಿ ಸಂಚರಿಸದೆ ಯಿದ್ದು ಹೊರಗೆ ಅರಣ್ಯಗಳಲ್ಲಿ ವಾಸಿಸುತ್ತಿದ್ದರು। ಆದರೂ ತಂಮ ರೋಗಗಳಿಂದ ತಂಮಂನು ಸ್ವಸ್ಥ ಪಡಿಸಿಕೊಳ್ಳುವದಾಗಿ ಸ್ವಾಮಿಗಳ ಸಂನಿಧಾನಕ್ಕೆ ನಾನಾ ಕಡೆಯಿಂದಲೂ ಜನರು ಏಕವಾಗಿ ಕೂಡಿಕೊಂಡು ಬರುತ್ತಿದ್ದರು॥

ಹೀಗಿರಲಾಗಿ ನೂರಕ್ಕೆ ಅಧಿಪತಿಯಾದವನೊಬ್ಬನಿದ್ದನು। ಇವನಿಗೆ ಬಹು ಪ್ರೀತಿಯಾದ ಭೃತ್ಯನೊಬ್ಬನು ಯಿದ್ದನು। ಆದರೆ ಆ ಭೃತ್ಯನು ಮರಣಾವಸ್ಥೆಯಲ್ಲಿ ಬಿದ್ದಿದ್ದನು। ಆಗಲು ಆ ನೂರಕ್ಕೆ ಅಧಿಪತಿಯಾದವನು ಸ್ವಾಮಿಗಳ ಅದ್ಭುತಗಳಂನು ಕೇಳಿ ಜ್ಯೂದೆಯರ ಹಿರಿಯವರೊಳಗೆ ಕೆಲವರನ್ನು ಅವರ ಬಳಿಗೆ ಕಳುಹಿಸಿ ಹೇಳಿಸಿದ್ದೇನಂದರೆ। ಸ್ವಾಮೀ ನಂನ ಸೇವಕನು ವಾಯುವು ರೋಗಿಷ್ಟನಾಗಿ ಮನೆಯಲ್ಲಿ ಬಿದ್ದು ಬಹು ಶ್ರಮೆ ಪಡುತ್ತಾನೆ ತಾವು ಚಿತ್ತೈಸಿ ಅವನಿಗೆ ಸ್ವಸ್ಥ ಪಡಿಸಿರಿ ಯೆಂದು ಹೇಳ ಕಳುಹಿಸಿದನು। ಆದರೆ ಯೀ ಹಿರಿಯರು ಸ್ವಾಮಿಗಳ ಸಂನಿಧಾನಕ್ಕೆ ಬರಲಾಗಿ ಅವರಂನು ಬಹು ದೈನ್ಯವಾಗಿ ಪ್ರಾರ್ಥಿಸಿಕೊಂಡು ಹೇಳಿದ್ದು। ಸ್ವಾಮೀ

ಇಂಥಾ ವುಪಕಾರವಂನು ತಾವು ಅವನಿಗೆ ಪಾಲಿಸುವಹಾಗೆ ಆಪ್ತನಾಗಿದ್ಧಾನೆ। ಯಾಕೆಂದರೆ ನಂಮ ಜನರ ಮೇಲೆ ಬಹು ಪಕ್ಷವ ತೋರಿಸಿ ನಮಗೊಂದು ಸಿನಗೋಗವಂ ಕಟ್ಟಿಸಿಕೊಟ್ಟಿದ್ಧಾನೆ ಯೆಂದು ಹೇಳಿದರು। ಆಗಲು ಸ್ವಾಮಿಯವರು ನಾವೇ ಚಿತ್ತೈಸಿ ಅವನ ಸೇವಕನಿಗೆ ಆರೋಗ್ಯವಂನು ಪಾಲಿಸುವೆವೆಂದರು। ತರುವಾಯ ಸ್ವಾಮಿಯವರು ವಿಜಯವಂಗೈಯುವಾಗ ಆ ನೂರಕ್ಕೆ ಅಧಿಪತಿಯಾದವನು ತಂನ ಬಳಿಗೆ ಚಿತ್ತೈಸಿ ಬರುವ ಸ್ವಾಮಿಗಳ ಘನತೆಯನ್ನು ಅಧಿಕಾಧಿಕವಾಗಿ ತಿಳಿದು ತಂನ ಸ್ನೇಹಿತರೊಳಗೆ ಕೆಲವರನ್ನು ಅವರಿಗೆದುರಾಗಿ ಕಳುಹಿ ಹೇಳಿಸಿದ್ದೇನಂದರೆ। ಸ್ವಾಮಿ ತಾವು ನಂನ ಗೃಹಕ್ಕೆ ಚಿತ್ತೈಸಿ ಬರ ನಾನು ಪಾತ್ರನಲ್ಲ। ಮತ್ತು ನಾನು ತಂಮ ಸಂನಿಧಿಗೆ ಬರಲು ಆಪ್ತನು ಅಲ್ಲವೆಂದು ಯೆಣಿಸಿಕೊಂಡೆನು ಆದರೆ ತಾವು ಒಂದು ವಾಕ್ಯ ಮಾತ್ರ ಪಾಲಿಸಿದರೆ ನಂನ ಸೇವಕನು ಸ್ವಸ್ಥ ಪಡುವನು। ಏನಂದರೆ ಸಮಸ್ತವು ನಿಮಗೆ ವಿಧೇಯವಾಗಿದೆ ತಾವು ಈ ಅದ್ಭುತವನ್ನು ಸುಲಭವಾಗಿ ಮಾಡಬಹುದು। ಯಾಕೆಂದರೆ ನಾನು ಕೆಲವು ಮಂದಿಗಳ ಮೇಲೆ ಅಧಿಪತಿಯಾಗಿ ನೇಮಿಸಲ್ಪಟ್ಟವನು। ಅವರಲ್ಲಿ ವೊಬ್ಬನ್ನ ನೋಡಿ ಹೋಗು ಅಂದರೆ ಹೋಗುತ್ತಾನೆ। ಮತ್ತೊಬ್ಬನಿಗೆ ಬಾ ಯೆಂದರೆ ಬರುತ್ತಾನೆ। ಮತ್ತು ನಂನ ಸೇವಕಂನ ನೋಡಿ ಯಿದನ್ನು ಮಾಡು ಅಂದರೆ ಮಾಡುತ್ತಾನೆ ಯೆಂಬದಾಗಿ ಹೇಳ ಕಳುಹಿಸಿದನು। ಆಗಲು ಸ್ವಾಮಿಯವರು ಅವನ ವಿಶ್ವಾಸದ ಮೇಲೆ ವಿಸ್ಮಯ ಪಟ್ಟು ತಂಮ ಸುತ್ತಲಿನಲ್ಲಿದ್ದಂಥವರ ನೋಡಿ ನಿಶ್ಚಯವಾಗಿ ನಿಮಗೆ ಹೇಳುತ್ತೇವೆ। ಇಸ್ರಾಯೇಲಿನ ಪುತ್ರರೊಳಗೆ ಯಿಂಥಾ ವಿಶ್ವಾಸವಂನು ನಾವು ಕಂಡದ್ದಿಲ್ಲವು। ಇದರ ನಿಮಿತ್ತ ನಿಮಗೆ ಹೇಳುತ್ತೇವೆ। ಸ್ವಾಗತ್ವ ಹೊಂದಿದ ಮಕ್ಕಳು ಹೊರಗೆ ನೂಕಲ್ಪಡಲಾಗಿ ಅನೇಕರು ಮೂಡಲಿನಿಂದಲೂ ಪಡುವಲಿನಿಂದಲೂ ಬಂದು ಪರಲೋಕದ ರಾಜ್ಯದಲ್ಲಿ ಪ್ರವೇಶಿಸುವರು ಎಂದರು। ಇದಲ್ಲದೆ ಸ್ವಾಮಿಗಳು ಅವನಿಗೆ ಪುನಶ್ಚ ಹೇಳಿಸಿದ್ದು ಯೇನಂದರೆ। ನಿಂನ ವಿಶ್ವಾಸದ ಪ್ರಕಾರ ನಿನಗಾಗಲಿ ಎಂದು ಪಾಲಿಸುತ್ತಲೇ ಅವನ ಸೇವಕನು ಗುಣಪಟ್ಟನು। ಮತ್ತು ಸ್ವಾಮಿಗಳ ಸಂನಿಧಿಗೆ ಕಳುಹಿಸಲ್ಪಟ್ಟಿದ್ದಂಥವರು ತಿರಿಗಿ ಬಂದಾಗ

ಅವನು ಸ್ವಸ್ಥವಾಗಿ ಯಿರುವದಂನು ಕಂಡರು॥



ಕ್ರೀಸ್ತುವರುಗಳಿರಾ। ಮೇಲೆ ಹೇಳಿದ ಸೂರಕ್ಕೆ ಅಧಿಪತಿಯಾದವನೂ ವ್ಯಾಧಿಷ್ಟಳಾದ ಸ್ತ್ರೀಯ್ಯೂ ತಂಮ ಪೂರ್ಣ ವಿಶ್ವಾಸ ನಂಬಿಕೆಯಿಂದಲೂ ಮನೋದೈನ್ಯದಿಂದಲೂ ದಿವ್ಯ ರಕ್ಷಕರ ವುಪಕಾರಗಳಿಗೆ ಪಾತ್ರರಾದರೆಂತ ನೀವು ಕೇಳಿದಿರಲ್ಲಾ ಯೇನಂದರೆ। ಜೇಸುನಾಥರು ಸರ್ವಜ್ಞರೂ ಕರ್ತರಾಗಿದ್ಧಾರೆಂಬದಾಗಿಯೂ ಅವರು ಪೊಂದೇ ವಾಕ್ಯ ಮಾತ್ರ ಪಾಲಿಸಿದರೆ ತನ ಸೇವಕನಿಗೆ ವ್ಯಾಧಿ ನಿವಾರಣೆಯಾಗುವದೆಂಬದಾಗಿಯೂ ನಂಬಿಕೊಂಡದ್ದಲ್ಲದೆ ಅಂಥಾ ಮಹಿಮೆಯುಳ್ಳ ಸ್ವಾಮಿಯವರಂನು ತಂನ ಮನೆಗೆ ಕರೆಕೊಳ್ಳುವದು ನ್ಯಾಗಾದೀತೆಂಬದಾಗಿ ಬಹು ವಿನಯ ಮನದೈನ್ಯವಂನು ತೋರಿಸಿದವನಾದನು। ಜೇಸುನಾಥರು ಯಿವನಲ್ಲಿ ಅಷ್ಟು ಪ್ರೊಳ್ಳೇ ಗುಣವಂನು ಕಂಡು ಸರ್ವರ ಮುಂದೆಯು ಆತನಂನು ಮೆಚ್ಚಿಕೊಂಡು ಅವನು ಬಿಂನಹಿಸಿದ ಮನವಿಯಂನು ಪಾಲಿಸ ಕರುಣಿಸಿದರು। ಮತ್ತು ವ್ಯಾಧಿಷ್ಟಳಾದ ಆಕೆಯು ದಿವ್ಯ ರಕ್ಷಕರಲ್ಲಿ ಸಕಲ ಮೇಲುಗಳ ಬತ್ತಿಹೋಗದ ಬುಗ್ಗೆಯು ಅಡಗಿರುವದೆಂದು ಅವರಿಗೆ ಸಂಬಂಧವಾದ ವಸ್ತುಗಳೆಲ್ಲಾ ಅವರ ಪರಿಶುದ್ಧತ್ವದಿಂದ ತುಂಬಿದವುಗಳಾಗಿವೆ ಯೆಂದೂ ನೆನಸಿ ಸ್ವಾಮಿಯವರ ಅಂಗಿಯ ಶೆರಗಂನು ಬಹು ನಂಬಿಕೆಯಾಗಿ ಮುಟ್ಟಿದಾಕ್ಷಣವೇ ಅವಳ ವ್ಯಾಧಿಯು ಪರಿಹರವಾಯಿತು। ಕ್ರೀಸ್ತುವರುಗಳಿರಾ ನೀವು ಸದ್ಗುಣವಂನು ತಕೊಳ್ಳುವಾಗಲು ಅರ್ಚ॰ ಜೊವಂನೇಸ್ ಕ್ರಿಸೊಸ್ತೋಮುಸೆಂಬವರು ಹೇಳಿದ ಮೇರೆಗೆ। ನೀವು ಜೇಸುನಾಥರ ವಸ್ತ್ರಗಳಂನು ಮುಟ್ಟದೆ ಯಿವರಂನೇ ನೋಡಿ ಮುಟ್ಟಿ ಹೋಜಿಸಿಕೊಂಡಿರುತ್ತೀರಿ। ನಿಂಮ ಶರೀರಕ್ಕೆ ಅವರ ತಿರು ದೇಹವು ಯೇಕವಾಗುತ್ತೆ ಅವರ ತಿರು ರಕ್ತವು ನಿಂನ ರಕ್ತಧಾತುಗಳೊಳಗೆ ಹರಿದು ನಿಂಮ ರಕ್ತದೊಳಗೆ ಬೆರೆಯುತ್ತದೆ। ಹಾಗಾದರೆ ಅವರು ನಿಂಮೊಳಗೆ ಚಿತ್ತೈಸಿ ಬರುವ ಸಮಯದಲ್ಲಿ ನೀವು ಅವರ ಜ್ಞಾನ ಬಲಕ್ಕೂ ಲಕ್ಷಣಗಳಿಗೂ ಪುಣ್ಯ ಫಲಾದಿಗಳಿಗೂ ಪಾಲುಕಾರರಾಗುವಿರೆಂದು ನಂಬಿಕೊಳ್ಳ ಬೇಕಾಗಿರುತ್ತದೆ। ಆದರೆ ಅನೇಕಮಂದಿ ಕ್ರಿಸ್ತು

ವರು ದೇವಪ್ರಸಾದವನ್ನು ಆಗಾಗ್ಯೆ ತೆಗದುಕೊಂಡಾಗ್ಯು ಅಂಥಾ ಮೇಲಾದ ವರದಿಂದ ಅವರಿಗೆ ಯಾವದೊಂದು ಫಲವಾದರೂ ಸಿಕ್ಕದೆ ಹೋಗುವದೇನು? ಇದಕ್ಕೆ ದೃಷ್ಟಾಂತವಾಗಿ ಒಂದು ಉಪಮಾನವನ್ನು ಹೇಳ ಹೋಗುತ್ತೇವೆ ಅದೇನಂದರೆ। ಸುಖವಾದ ಶರೀರಕ್ಕೆ ಒಳ್ಳೇ ಭೋಜನ ಕೊಡುವಂಥವನು ಯಾವನೋ ಅವನು ಇದರ ಮುಖಾಂತ್ರದಿಂದ ಮತ್ತು ಬಲಾಢ್ಯನಾಗುವನಲ್ಲವೇ? ಆದರೆ ಜಠರಾಗ್ನಿ ಇಲ್ಲದಂಥಾ ಎದೆಯಲ್ಲಿ ಎಷ್ಟು ಮೇಲಾದ ಪದಾರ್ಥಗಳನ್ನು ಕೊಟ್ಟಾಗ್ಯು ಯಿವು ಶರೀರವ ಗುಣಪಡಿಸದೆ ಯಿರುವದಲ್ಲದೆ ಆ ಶರೀರವು ಮತ್ತು ರೋಗದ್ದಾಗಿದ್ದೀತು। ಯಿದರ ಅರ್ಥವೇನಂದರೆ ಜೇಸುನಾಥರನ್ನು ಶುದ್ಧ ಹೃದಯದಲ್ಲಿ ಅಂಗೀಕರಿಸಿದಂಥವರು ಲೆಖ್ಖವಿಲ್ಲದ ಜ್ಞಾನ ಪ್ರಯೋಜನಗಳನ್ನು ಹೊಂದುವ ಮೇರೆಗೆ ತಕ್ಕ ಆಯಿತ್ತವಿಲ್ಲದೆ ಕಳಂಕವುಳ್ಳ ಆತ್ಮಕ್ಕೆ ಆ ದಿವ್ಯ ಆಹಾರವನ್ನು ತೆಕ್ಕೊಳ್ಳುವಂಥ ಕೆಟ್ಟ ಕ್ರೀಸ್ತನರು ಅಧಿಕ ಕೆಟ್ಟವರಾಗುತ್ತಾರೆಂಬುವದು ಯಿಥಾರ್ಥವು। ಆದ್ದರಿಂದ ಕ್ರೀಸ್ತುನಾಥನು ನಮ್ಮ ಹೃದಯದಲ್ಲಿ ಚೈತ್ರೈಸಿ ಇದರ ಜ್ಞಾನ ರೋಗ ವ್ಯಾಧಿಗಳನ್ನೆಲ್ಲಾ ಪರಿಹರಿಸ ಬೇಕೆಂದು ನಾವು ಅಪೇಕ್ಷಿಸುವೆವಾದರೆ ಮೇಲೆ ಹೇಳಿದ ಆ ಇಬ್ಬರು ಪುಣ್ಯಾತ್ಮರ ದೇವವಿಶ್ವಾಸವನ್ನೂ ಮನೋದೈನ್ಯವನ್ನೂ ಕಂಡು ಭಾವಿಸುವದಲ್ಲದೆ ಪಾಪಸಂಕೀರ್ತನವೂ ಉತ್ತಮ ಮನಸ್ತಾಪವೂ ಯಿವುಗಳ ಮುಖಾಂತ್ರವಾಗಿ ನಮ್ಮ ಆತ್ಮಗಳನ್ನು ಶುದ್ಧಿಕರಿಸ ಪ್ರಯಾಸ ಪಡುವೆವಾಗಲಿ॥

೨ನೇದು। ಪೂರ್ವ ವೇದದಲ್ಲಿ ಸಬ್ಬಾತು ಯೆಂಬ ದಿವಸವನ್ನು ಆಚರಿಸ ಬೇಕೆಂದು ಸರ್ವೇಶ್ವರನು ಜೂದೆಯರಿಗೆ ಬಹು ಖಂಡಿತವಾಗಿ ಆಜ್ಞಾಪಿಸಿದನು ಹ್ಯಾಗೆಂದರೆ। ಆರು ದಿವಸಗಳೊಳು ನೀನು ಕೆಲಸವುದ್ಯೋಗಗಳನ್ನೆಲ್ಲಾ ತೀರಿಸುವಿರಿ। ಆದರೆ ಯೇಳನೇ ದಿವಸವು ಕರ್ತರ ದಿವಸವಾಗಿಧೆ। ಯಾಕೆಂದರೆ ಸರ್ವೇಶ್ವರನು ಸಕಲವನ್ನು ಸೃಷ್ಟಿಸಿದ ಬಳಿಕ ಆ ದಿವಸದಲ್ಲಿ ವಿಶ್ರಾಂತಿಯಾದನು। ಆ ದಿನದಲ್ಲಿ ನೀನಾಗಲಿ ನಿನ್ನ ಭೃತ್ಯನಾಗಲಿ ನಿನ್ನ ಮನೆಯಲ್ಲಿರುವ ಪರದೇಶಿಯಾಗಲಿ ಯಾವದೊಂದು ಕೆಲಸವನ್ನಾದರೂ ಮಾಡದೆ ಯಿರ ಬೇಕೆಂಬದಾಗಿ ಸರ್ವೇಶ್ವರನು

ವಿಧಿಸಿ ಇದ್ದರು। ಮತ್ತು ಆ ಕಟ್ಟಳೆಯನ್ನು ಮೀರಿ ಹೋದಂಥವರನ್ನು ಎಷ್ಟು ಕಠಿಣವಾಗಿ ಕರ್ತರು ದಂಡಿಸುತ್ತಾ ಇದ್ದರೆಂತ ನಿಮ್ಮ ಜ್ಞಾಪಕಕ್ಕೆ ತಂದು ಕೊಳ್ಳ ಬಹುದು ಹೇಗಂದರೆ। ಸಬ್ಬಾತು ದಿನದಲ್ಲಿ ಸೌದೆ ಪುಳ್ಳೆಗಳನ್ನು ಆಯಿಕೊಂಡಂಥಾ ಮನುಷ್ಯನೊಬ್ಬನನ್ನು ಸಭೆಯಾದ್ಯಂತವು ಹಿಡಿದು ದೇವರ ಕಟ್ಟಳೇ ಪ್ರಕಾರ ಕೊಂದ್ಹಾಕಿದರೆಂದು ಮೇಲೆ ವಿವರಿಸಿದೆವಲ್ಲಾ। ಸ್ಪಿರಿತುಸಾಂಕ್ತುವಿನ ಪ್ರೇರೇಪಣೆಗೆ ಅನುಸಾರವಾಗಿ ಅಪೋಸ್ತಲರು ಆದಿತ್ಯವಾರವೆಂಬ ದಿವಸವನ್ನು ಸರ್ವೇಶ್ವರನ ದಿವಸವಾಗಿರುವಹಾಗೆ ಏರ್ಪಡಿಸಿ ಮೇಲೆ ಹೇಳಿದ ಸಬ್ಬಾತೆಂಬ ದಿವಸದ ಸಾಲವನ್ನು ಆ ದಿವಸಕ್ಕೆ ಬದಲಾಗಿ ನೇಮಿಸಿದರು। ಈ ನಿಮಿತ್ಯ ಆದಿತ್ಯವಾರದಲ್ಲಿ ಕೈಕಷ್ಟ ವುದ್ಯೋಗ ಕೆಲಸಗಳನ್ನು ಯಾವನು ಮಾಡುವನೋ ಅವನು ಪಾಪ ಕಟ್ಟಿಕೊಳ್ಳುವದು ನಿಜವು। ಮತ್ತು ಅಂಥಾ ಕೆಲಸವನ್ನು ಬಹು ಹೊತ್ತು ನಡೆಸಿದರೆ ಪಾಪವು ಸಾವಾದ ಪಾಪವಾಗುವದೆಂಬುವದಕ್ಕೆ ಸಂದೇಹವಿಲ್ಲವು। ಆದರೆ ತಪ್ಪಿಸ ಕೂಡದ ಅವಸರವೂ ಪರರ ಸ್ನೇಹವೂ ದೇವ ಭಕ್ತಿ ಅರ್ಚನೆಯೂ ಈ ಮೊದಲಾದ ನಿಮಿತ್ತಗಳಿಂದ ಆದಿತ್ಯವಾರದಲ್ಲಿ ಕೈ ಕೆಲಸವನ್ನು ಮಾಡ ಬೇಕಾಗಿದ್ದರೆ ಪಾಪವಾಗುವದಿಲ್ಲವೆಂಬದಾಗಿ ವೇದ ಪಾರಕರು ಬೋಧಿಸುತ್ತಾರೆ। ಇದಕ್ಕೆ ದೃಷ್ಟಾಂತವಾಗಿ ಶಿಷ್ಯರ ಮೇಲೆ ತಪ್ಪು ಹೊರಿಸುತ್ತಾ ಇದ್ದ ಫರಿಜಯರಿಗೆ ನಮ್ಮ ದಿವ್ಯ ರಕ್ಷಕರು ತಾವೇ ಬಹು ಸ್ಪಷ್ಟವಾದ ವುದಾಹರಣೆಗಳಿಂದ, ಬಾಯಿ ಮುಚ್ಚ ಮಾಡಿದರು। ಆದರೆ ಮೇಲೆ ಹೇಳಿದ ಕಾರಣಗಳು ಯಾವಾಗಲು ದೊರಕುತ್ತವೆ ಹೊಂದೂ ತನ ತನ ಇಚ್ಛೆ ಬಂದಹಾಗೆ ಒಬ್ಬೊಬ್ಬನು ಕರ್ತರ ದಿವಸವನ್ನು ಮೀರಿ ಹೋಗ ಬಹುದೆಂದೂ ಅದರಿಂದ ನೀವು ಯೋಚಿಸ ಬ್ಯಾಡಿರಿ। ಕೆಲವು ಮಂದಿ ಕ್ರೀಸ್ತುವರು ಆ ಘನವಾದ ಕಲ್ಪಣೆಗೆ ಸದ್ದೆ ಮಾಡುವದಿಲ್ಲವೆಂಬುವದು ಸಹಜವೇ। ಮುಖದಾಕ್ಷಿಣ್ಯದಿಂದಲಾದರೂ ಲಾಭದ ಆಶೆಯಿಂದಲಾದರೂ ಎಷ್ಟೋ ಮಂದಿ ನ್ಯಾಯವಾದ ಕಾರಣವಿಲ್ಲದೆ ಆದಿತ್ಯವಾರವನ್ನು ಮೀರಿ ನಡೆಯುವರು। ಅನ್ಯಾಯಸ್ತರಾದ ಪಾಪಿಷ್ಟರೇ ನಿಮ್ಮ ಸ್ವಂತ ಕಾರ್ಯಗಳನ್ನು ವಿಚಾರಿಸುವದಕ್ಕಾಗಿ ದೇವರು ನಿಮಗೆ ಆರು ದಿವಸಗಳ ಪಾಲಿಸಿದ್ದಲಾಗಿ ನೀವು

ಅವರನ್ನು ಆರಾಧಿಸ ಒಂದೇ ದಿವಸವನ್ನಾದರೂ ಪ್ರಯೋಗಿಸದೆ ಹೋಗುವಿರೋ? ಆರು ದಿವಸಗಳೊಳಗೆ ಶರೀರಕ್ಕೆ ಸಂಬಂಧವಾದ ಕಾರ್ಯಗಳನ್ನೂ ಅರಿದು ಹೋಗುವ ಪ್ರಯೋಜನಗಳನ್ನೂ ವಿಚಾರಿಸಿದ ಬಳಿಕ ನಿಮ್ಮ ಆತ್ಮದ ಪ್ರಯೋಜನವನ್ನೂ ನಿತ್ಯ ರಕ್ಷಣ್ಯದ ಮಾರ್ಗವನ್ನೂ ವಿಚಾರಿಸುವ ಹಾಗೆ ಒಂದೇ ದಿವಸವನ್ನಾದರೂ ಕಳಿಯುತ್ತಾ ಬರುವಿರಾಗಲಿ॥



## ೧೦ ನೇ ಅಧ್ಯಾಯವು॥



### ಜೇಸುನಾಥರು ಮಾಡಿದ ಬೇರೆ ವೃತ್ತಾಂತಗಳ ಕುರಿತು।

ಜೇಸುನಾಥರು ತಮ್ಮ ಶಿಷ್ಯರೊಂದಿಗೂ ಜನ ಸಮೂಹದೊಂದಿಗೂ ನಯಿಮೆಂಬ ಪಟ್ಟಣಕ್ಕೆ ಚಿತ್ತೈಸಿ ಬರುತ್ತಿದ್ದರು। ಆದರೆ ಅವರು ಆ ಪಟ್ಟಣದ ಬಾಗಲಿಗೆ ಸಮೀಪಿಸುತ್ತಿರುವಾಗ ಇಗೋ ಒಬ್ಬ ವಿಧವೆಯ ಸತ್ತು ಹೋದ ಏಕ ಕುಮಾರನನ್ನು ಸಮಾಧಿಯ ಸ್ಥಳಕ್ಕೆ ಹೊತ್ತುಕೊಂಡು ಹೋಗುತ್ತಿದ್ದರು। ಇವನ ತಾಯ್ಯಾದವಳು ಕಣ್ಣೀರುಗಳ ಬಿಟ್ಟು ಜನ ಸಮೂಹದ ಸಂಗಡ ಹಿಂದೆ ನಡಿಯುತ್ತಿದ್ದಳು। ಆಗಲು ಸ್ವಾಮಿಗಳು ಆಕೆಯನ್ನು ನೋಡಿ ಕನಿಕರಪಟ್ಟು ಅಳ ಬ್ಯಾಡ ಅಮ್ಮಾ ಎಂದು ಪಾಲಿಸಿದರು। ತೇದಿಗೆಯನ್ನು ಹೊತ್ತುಕೊಂಡುಹೋಗುತ್ತಿದ್ದವರು ನಿಂತರು। ಆಗಲು ಸ್ವಾಮಿಗಳು ಹತ್ರ ಬಂದು ತೇದಿಗೆಯನ್ನು ಮುಟ್ಟಿ ತಮ್ಮ ಶಬ್ದವನ್ನೆತ್ತಿ ಪಾಲಿಸಿದ್ದು। ಮಗನೇ ನಿನಗೆ ಆಜ್ಞಾಪಿಸುತ್ತೇವೆ ಎದ್ದು ಬಾ ಎಂದರು। ಆಗಲೇ ಸತ್ತವನು ಎದ್ದು ಮಾತನಾಡ ತೊಡಗಿದನು। ಮತ್ತು ಸ್ವಾಮಿಗಳು ಅವನ ತಾಯಿಗೆ ಒಪ್ಪಿಸಿ ಕೊಟ್ಟರು। ಅದನ್ನು ಕಂಡು ಸಮಸ್ತರು ವಿಸ್ಮಯ ಭರಿತರಾಗಿ ದೇವರನ್ನು ಮಹಿಮೆ ಪಡಿಸುತ್ತಾ ಹೇಳಿದ್ದೇನಂದರೆ। ನಮ್ಮಲ್ಲಿ ಒಬ್ಬ ಮಹಾ ದೀರ್ಘದರ್ಶಿ ಎದ್ದರು। ಮತ್ತು ಸರ್ವೇಶ್ವರನು ತಮ್ಮ ಜನರನ್ನು ಕನಿಕರಿಸಿದರು ಎಂಬದಾಗಿ ಹೇಳುತ್ತಿದ್ದರು॥

ಆ ಕಾಲದಲ್ಲಿ ಶಿಮೋನೆಂಬ ಹೆಸರುಳ್ಳ ಫರಿಜಯನೊಬ್ಬರು ಸ್ವಾಮಿಗಳಂನು ಭೋಜನಕ್ಕೆ ಕರದನು। ಆಗಲು ಸ್ವಾಮಿಗಳು ಫರಿಜಯನ ಮನೆಗೆ ಪ್ರವೇಶಿಸಿ ಭೋಜನಕ್ಕೆ ಕುಳಿತುಕೊಂಡರು । ಮತ್ತು ಅಗೋ ಆ ಪಟ್ಣದಲ್ಲಿ ಪಾಪಿಷ್ಟಳಾಗಿದ್ದ ಒಬ್ಬ ಸ್ತ್ರೀಯ್ಯಾದವಳು ಅಲ್ಲಿಗೆ ಸ್ವಾಮಿನುವರು ಚಿತ್ತೈಸಿದರೆಂತ ತಿಳಿದು ಪರಿಮಳ ತೈಲದಿಂದ ತುಂಬಿದ ಒಂದು ಪಾತ್ರೆಯಂನು ತೆಗದುಕೊಂಡು ಹಿಂದಕ್ಕೆ ಬಂದು ತಂನ ಕಂಣೀರುಗಳಿಂದ ಅವರ ಪಾದಗಳಂನು ತೊಳೆಯುಲೂ ತಂನ ತಲೆ ಕೂದಲುಗಳಿಂದ ವರಸಲೂ ಪರಿಮಳ ತೈಲದಿಂದ ಅವುಗಳಿಗೆ ಲೇಪಿಸಲೂ ಮುದ್ದಿಡಲೂ ಪ್ರಾರಂಭಿಸಿದಳು । ಆಗ ಸ್ವಾಮಿಗಳನ್ನು ಔತನಕ್ಕೆ ಕರದಂಥಾ ಫರಿಜಯನು ತಂನೋಳಂದುಕೊಂಡದ್ದೇನಂದರೆ। ಇವರು ದೀರ್ಘದರ್ಶಿಯಾಗಿದ್ದರೆ ತಂಮನ್ನು ಮುಟ್ಟುವಂಥಾ ಸ್ತ್ರೀಯಾದವಳು ಎಂಥಾವಳೆಂದು ತಿಳಿಕೊಳ್ಳುವರು। ಯಾಕೆಂದರೆ ಯಾಕೆ ಪಾಪಿಷ್ಟಳಾಗಿದ್ಧಾಳಂದುಕೊಂಡಿದ್ದನು। ಆದರೆ ಅಂತರ್ಯದ ಯೋಚನೆಗಳಂನು ವಿಚಾರಿಸುವಂಥಾ ನಂಮ ದಿವ್ಯ ರಕ್ಷಕರು ಆ ಫರಿಜಯಂನ ನೋಡಿ ಸಿಮೋನನೇ ನಿನಗೊಂದು ಮಾತು ಹೇಳುತ್ತೇವೆ ಎಂದು ಪಾಲಿಸಲಾಗಿ ಬೋಧಕರೇ ಹೇಳಿರೆಂದನು। ಆಗ ಸ್ವಾಮಿಗಳು ಹೇಳಿದ್ದು। ಒಬ್ಬ ಮನುಷ್ಯನಿಗೆ ಯಿಬ್ಬರು ಸಾಲಗಾರರಿದ್ದರು॥ ಅವರೊಳಗೆ ಒಬ್ಬನು ಐನೂರು ಮತ್ತೊಬ್ಬನು ಐವತ್ತು ಹಣಗಳ ಕೊಡ ಬೇಕಾಗಿತ್ತು ಆದರೆ ಅವರು ತಂಮ ಸಾಲವಂನು ತೀರಿಸಲಾರದೆ ಯಿರಲಾಗಿ ಆ ಸಾಲ ಕೊಟ್ಟವನು ಅವರಿಗೆ ಮಾಫು ಮಾಡಿದನು। ಹೀಗಿದ್ದು ಅವರೊಳಗೆ ಅಧಿಕವಾಗಿ ಅವಂನ ಸ್ನೇಹಿಸುವವನ್ಯಾರೆಂದು ಕೇಳಲಾಗಿ ಸಿಮೋನನು ಪ್ರತ್ಯುತ್ತರವಾಗಿ । ಯಾವನಿಗೆ ಅಧಿಕವಾಗಿ ಮಂನಿಸಿದನೋ ಅವನೇ ಎಂತ ನೆನಸುತ್ತೇನೆಂದನು। ಅದಕ್ಕೆ ಸ್ವಾಮಿಗಳು ನೀನು ಹೇಳಿದ್ದು ನ್ಯಾಯವೇ ಎಂಥೇಳಿ ಆ ಸ್ತ್ರೀಯ್ಯ ಕಡೆಗೆ ತಿರಿಗಿ ಸಿಮೋನನ ಸಂಗಡ। ಈ ಸ್ತ್ರೀಯ್ಯನ್ನು ನೋಡುತ್ತೀಯೋ। ನಾವು ನಿಂನ ಗೃಹಕ್ಕೆ ಬಂದಾಗ್ಯೆ ನೀನು ನಂಮ ಪಾದಗಳಿಗೆ ನೀರಂನು ಕೊಡದೆ ಯಿದ್ದಿ। ಈಕೆಯೋ ತಂನ ಕಂಣೀರುಗಳಿಂದ ನಂಮ ಪಾದಗಳನ್ನು ತೊಳದು ತಂನ ತಲೆಯ

కూదలుగళింద వరసిదళు । నీను నమగె ముద్దంను యిక్కలిల్ల, ఇవళాదరె నంమ పాదగళిగె బిడదె ముద్దంనిక్కిదళు. నీను నంమ తలెగె యెంణె హచ్చలిల్ల! ఈకెయో పరిమళ తైలదింద నంమ పాదగళిగె లేపన మాడిదళు । ఇదర నిమిత్త నినగె హేళుత్తేనె ఆకె నంమ మేలె అతి ప్రీతియంను తోరిసిద కారణ ఆకెయ అనేక పాపగళు మంనిసల్పడుత్తవె. ఆదరె కెల పాపగళ క్షమెయంను హొందిదవను అల్పవాగి ప్రీతిసుత్తానె. ఈకెయో తంన పాపగళ క్షమెయంను హొందువదక్కింతా ముంచె హ్యాగె కర్తగంను ప్రీతిస తొడగిదళో యాగ తనగె యిష్ట పాలవంను బిట్టంథా స్వామియంను యిన్ను అతి భక్తియొందిగె ప్రీతిసువళు యెందదు! ఆ తరువాయ స్వామిగళు ఆకెయన్ను నోడి నింన పాపగళు నినగె మంనిసల్పట్టవు. నింన విశ్వాసవు నింనంను రక్షిసితు. ఈగ సమాధానదల్లి హోగు యెందు పాలిసిదర॥

ఆగలు స్నానిక యోవంనేసను సెరెశాలెయల్లిద్ద స్వామిగళు మాడువ అతిశయ అద్భుతగళంను కేళలాగి తంమ శిష్యరొళగె ఇబ్బరంను అవర సంనిధానక్కె కళుహిసి కేళిసిద్దేనందరె। బరువదక్కిరువ లోకద రక్షకరు నీవేనో అథవా ఇంనొబ్బరంన నిరీక్షిస బేకో యెందు కేళ హేళిదరు. ఆదరె స్నానిక యోవన్నేసను స్వామిగళ వుద్దేశ్యదల్లి సంశయ పట్టవరల్లా। యాకెందరె సర్వేశ్వరన కుమారనెందు క్రీస్తునాథర కురితు మొదలు సాక్షియంను కొట్టవరు యివరే । ఆదరె దివ్య యేసునాథరు మాడుత్తిద్ద అద్భుతగళ నోడి అవరల్లి తంమ శిష్యరు విశ్వాసవిడువ హాగె స్వామిగళ సంనిధిగె అవరంను కళుహిసిదరు। హీగిద్దు ఇవరు స్వామిగళ బళిగె బందు కేళిద్దేనందరె। స్వామీ బర హోగువ రక్షకరు నీవేనో అథవా యింనొబ్బరంన నిరీక్షిస బేకో యెందు కేళిదరు। ఆ తరుణదల్లియే స్వామిగళు అనేకరిగె జాడ్య

ಗಳಂನು ಪರಿಹರಿಸಿ ಅಶುದ್ಧ ಭೂತಗಳಂನು ಹೊರಡಿಸಿ ಅನೇಕ ಅಂಧಕರಿಗೆ ದೃಷ್ಟಿಯಂನು ಪಾಲಿಸಿದರು। ತರುವಾಯ ಸ್ನಾನಿಕ ಜೊವನ್ನೇಸನ ಶಿಷ್ಯರ ಸಂಗಡ ಸ್ವಾಮಿಗಳು ಹೇಳಿದ್ದು । ನೀವು ಹೋಗಿ ನೋಡಿದಂಥವುಗಳಂನೂ ಕೇಳಿದಂಥವುಗಳಂನೂ ಅವನಿಗೆ ವಿವರಿಸಿರಿ ಯೇನಂದರೆ। ಅಂಧಕರು ದೃಷ್ಟಿಯಂನು ಹೊಂದುತ್ತಾರೆ। ಕುಂಟರು ನಡೆಯುತ್ತಾರೆ। ಕುಷ್ಟಿಗಳು ಶುಚಿಯಂನೂ ಕಿವುಡರು ಶ್ರವಣವಂನೂ ಪಡೆಯುತ್ತಾರೆ । ಸತ್ತವರು ಯೇಳುತ್ತಾರೆ। ಗರೀಬರಿಗೆ ದೇವ ವಾಕ್ಯ ಅರುಹಿಸಲ್ಪಡುತ್ತೆ। ಇವುಗಳೆಲ್ಲವು ನಾವು ಕ್ರೀಸ್ತುನಾಥರೆಂತ ದೃಷ್ಟಾಂತ ಕೊಡುತ್ತವೆ ಅಲ್ಲವೋ? ಹೀಗಿರಲಾಗಿ ನಂಮ ಬೋಧನೆಯ ಮೇಲೆಯೂ ನಂಮ ನಡವಡಿಕೆಗಳ ಮೇಲೆಯೂ ಸಂದೇಹ ಮಾಡದಿರುವವನು ಭಾಗ್ಯವಂತನೆಂತ ಪಾಲಿಸಿದರು॥

ಆ ಶಿಷ್ಯರು ಹೊರಟು ಹೋದ ತರುವಾಯ ಜೊವಂನೇಸನಂನು ಸರ್ವರ ಮುಂದೆ ಸ್ವಾಮಿಗಳು ಸ್ತುತಿಸಲಾರಂಭಿಸಿ ಹೇಳಿದ್ದೇನಂದರೆ। ನೀವು ಅರಣ್ಯದಲ್ಲಿ ಯೇನು ನೋಡ ಹೊರಟಿದ್ದೀರಿ ಚಪಲ ಚಿತ್ತವುಳ್ಳ ಮನುಷ್ಯನಂನೋ ಕಡಿಮೆ ಮನುಷ್ಯರಿಗೆ ಯೀಡಾದವನಂನೋ ? ಘಾಳಿಯಿಂದ ಅಲ್ಲಾಡುವ ದಂಟಂನೊ ? ಇಂಥಾ ತಮಾಷೆಯಂನು ನೋಡುವ ಹಾಗೆ ಅರಣ್ಯಕ್ಕೆ ಹೋಗಲುಗತ್ಯವಿರಲಿಲ್ಲವಲ್ಲವೇ। ಏನು ನೋಡ ಹೊರಟಿದ್ದೀರಿ ರಾಜ ಗಾಂಭೀರ್ಯದಲ್ಲಿ ಬಾಳಿಗೊಂಡು ನಯವಾದ ಬಟ್ಟೆಗಳಂನು ತೊಟ್ಟು ಕೊಳ್ಳುವ ಮನುಷ್ಯನಂನೋ ? ಅರಣ್ಯಕ್ಕೆ ಹೋಗ ತಕ್ಕದ್ದಲ್ಲವು। ಯೇನಂದರೆ ಗಾಂಭೀರ್ಯದಲ್ಲಿಯೂ ಸುಖಗಳಲ್ಲಿಯೂ ಬಾಳುವಂಥವರು ರಾಯರ ಅರಮನೆಗಳಲ್ಲಿ ದೊರಕುವರು। ಅಲ್ಲದೆ ಏನು ನೋಡ ಹೊರಟಿರಿ ದೀರ್ಘದರ್ಶಿಯಂನೋ ? ಹೌದು ಮತ್ತು ದೀರ್ಘದರ್ಶಿಗಿಂತಾ ಆತನು ಅಧಿಕವಾದವನಾಗಿರುತ್ತಾನೆಂತ ನಿಮಗೆ ಹೇಳುತ್ತೇನೆ। ಏನಂದರೆ ನಂಮ ಮಾರ್ಗಗಳಂನು ಸಿದ್ಧ ಮಾಡುವ ಹಾಗೆ ನಮಗೆ ಮುಂದೆ ನಮ ದೂತನಂನು ಕಳುಹಿಸುತ್ತೇನೆಂದು ಯಾರಂನು ಕುರಿತು ಸರ್ವೇಶ್ವರನು ಮುಂದು ಹೇಳಿಸಿದ್ದರೋ ಯಾತನೇ ಸರಿ । ಹೀಗಿದ್ದು ಸ್ತ್ರೀಯರಿಗೆ ಹುಟ್ಟಿದಂಥ ಪುತ್ರರೊಳಗೆ ಸ್ನಾನಿಕ ಜೊವಂನೇಸನಿಗಿಂತಾ ಶ್ರೇಷ್ಟ ದೀರ್ಘದರ್ಶಿ

ಹೊಬ್ಬನೂ ಯಿಲ್ಲವೆಂತ ನಿಮಗೆ ಹೇಳುತ್ತೇವೆ ಅಂದರು । ಯಿದಂನು ಜನರು ಕೇಳಲಾಗಿ ಸ್ನಾನಿಕ ಜೊವಂನೇಸನ ತಪೋಸ್ನಾನದ ಮುಖಾಂತ್ರವಾಗಿ ತಂಮಂನು ರಕ್ಷಿಣ್ಯಕ್ಕೆ ಸಿದ್ಧ ಮಾಡಿದಂಥ ಸರ್ವೇಶ್ವರನಂನು ಮಹಿಮೆಪಡಿಸಿದರು। ಆದರೆ ತಪೋಸ್ನಾನವಂನು ತೆಕ್ಕೊಳ್ಳಲೊಲ್ಲದೆ ಯಿದ್ದಂಥಾ ಫರಿಜಯರೂ ನೀತಿಪಾಠಕರೂ ತಂಮಂನು ಕುರಿತು ಸರ್ವೇಶ್ವರನು ಮಾಡಿದ ಆಲೋಚನೆಗಳಂನು ನಿರಾಕರಿಸಿದರು।

ತರುವಾಯ ಪಿಶಾಚಿ ಹಿಡಿದವನೂ ಕುರುಡನೂ ಮೂಗನೂ ಆಗಿದಂಥ ಹೊಬ್ಬ ಮನುಷ್ಯನಂನು ಸ್ವಾಮಿಗಳಿಗೊಪ್ಪಿಸಲಾಗಿ ಅವನು ಮಾತನಾಡುವಹಾಗೂ ನೋಡುವಹಾಗೂ ಸ್ವಾಮಿಗಳು ಅವನಿಗೆ ಸ್ವಸ್ಥವಂನು ದಯಪಾಲಿಸಿದರು। ಅದಂನು ನೋಡಿದಂಥ ಜನ ಸಮೂಹವು ಬಹು ವಿಸ್ಮಿತರಾಗಿ ದಾವೀದನ ಕುಮಾರನಾಗಿರುವ ಕ್ರೀಸ್ತುನಾಥರು ಯಿತನಲ್ಲವೇ ? ಎಂಬದಾಗಿ ಹೇಳುತ್ತಿದ್ದರು। ಆಗಲು ಫರಿಜಯರೂ ನೀತಿಪಾಠಕರೂ ಹೇಳಿದ್ದು। ಪಿಶಾಚಿಗಳಿಗೆ ಶ್ರೇಷ್ಟನಾದ ಬೆಯೆಲ್ಜೆಬೂತೆಂಬವನ ಮುಖಾಂತರವಾಗಿ ಯಿತನು ಪಿಶಾಚಿಗಳಂನು ಹೊರಡಿಸುತ್ತಾನೆ ಅಂದುಕೊಂಡರು। ಸ್ವಾಮಿಗಳೋ ಅವರಂನು ಗದರಿಸಿ ಪಾಲಿಸಿದ್ದೇನಂದರೆ। ಪಿಶಾಚಿಗಳು ಪಿಶಾಚಿಗಳಂನು ಹೊರಡಿಸ ಬ್ಯಾಗಾದೀತು। ಯಾವ ರಾಜ್ಯವೂ ತನಗೆ ತಾನೇ ವಿರೋಧವಾಗಿ ಯಿದ್ದರೆ ಅದು ನಾಶನವಾಗಿ ಹೋಗುವದು। ಯಾವ ಪಟ್ಣವಾದರೂ ಯಾವ ಮನೆಯಾದರೂ ತಂನೊಳಗೆ ವಿಭಾಗವಾಗಿದ್ದರೆ ಅದು ನಿಲ್ಲಲಾರದು। ಹೀಗಿದ್ದು ಪಿಶಾಚಿಯು ಪಿಶಾಚಿಯಂನು ಹೊರಡಿಸಿದರೆ ತನಗೆ ತಾನೇ ವಿರೋಧವಾಗಿ ಯುದ್ಧ ಮಾಡಿದ ಕಾರಣ ಅದರ ರಾಜ್ಯಭಾರವು ನಿಲ್ಲಲಾರದೆ ಅದಕ್ಕೆ ಅಂತ್ಯವೂ ವುಂಟಾಗಿರುವದು। ಆದರೆ ಬೆಯೆಲ್ಜೆಬೂತನ ಹೆಸರಿನಲ್ಲಿ ದೆವ್ವಗಳಂನು ನಾವು ಹೊರಡಿಸಿದರೆ ನಿಂಮ ಪುತ್ರರು ಯಾರ ಹೆಸರಿನಲ್ಲಿ ಅವುಗಳಂನು ಹೊರಡಿಸುವರು ? ಆದರೆ ನಿಂಮ ಮಕ್ಕಳು ಪಿಶಾಚಿಯ ಹೆಸರಿನಲ್ಲಿ ಹೊರಡಿಸದೆ ಸರ್ವೇಶ್ವರನ ಹೆಸರಿನಲ್ಲಿ ಹೊರಡಿಸುತ್ತಾರೆ ಯೆಂದು ನೀವು ಹೇಳುತ್ತೀರಿ। ನಾವೂ ಅದೇ ಮೇರೆಗೆ ದೇವರ ನಾಮಧೇಯದಲ್ಲಿ ಅವುಗಳಂನು ಹೊರಡಿಸುತ್ತೇವೆ । ದೇವರ ರಾಜ್ಯವು

ನಿಮಗೆ ತೋರಿತು ಎಂದೂ ಪಿಶಾಚಿಯ ರಾಜ್ಯಕ್ಕೆ ಮುಗಿವುಂಟಾಯಿತೆಂದೂ ಇದರಿಂದ ನೀವು ತಿಳುಕೊಳ್ಳ ಬಹುದು। ಹೀಗಿದ್ದು ಬಲಾಢ್ಯನಂನು ಮೊದಲು ಕಟ್ಟಿಹಾಕಿದರೆ ವಿನಾ ಆ ಬಲಾಢ್ಯನ ಜಿಂದಗಿಗಳಂನು ಕದಿಯಲು ಯಾವನಿಂದಲಾದೀತು? ಇದೇ ಪ್ರಕಾರ ನಾವು ಪಿಶಾಚಿಯಂನು ಕಟ್ಟಿಹಾಕಿ ಅದರ ವಶದಲ್ಲಿ ಸಿಕ್ಕಿಸಿಕೊಂಡಂಥ ಮನುಷ್ಯರಂನು ಅದರ ಕೈಯ್ಯೊಳಗಿಂದ ಬಿಡಿಸಿಕೊಳ್ಳುತ್ತೇವೆ ಎಂಬದಾಗಿ ಪಾಲಿಸಿದರು॥

ಆಗಲು ನೀತಿ ಶಾಸ್ತ್ರಿಗಳೊಳಗೂ ಫರಿಜಯರೊಳಗೂ ಕೆಲವರು ಅವರಂನು ಕೇಳಿದ್ದು ಏನಂದರೆ। ಬೋಧಕರೇ ನಿಂಮಿಂದ ಒಂದು ಅದ್ಭುತವಂನು ನೋಡಲಪೇಕ್ಷಿಸ್ತೇವೆಂದರು। ಅದಕ್ಕೆ ಸ್ವಾಮಿಗಳು ಭ್ರಷ್ಟತ್ವವೂ ಅವಿಶ್ವಾಸಿಯೂ ಆದ ಈ ಸಂತತಿ ಆಶ್ಚರ್ಯವಂನು ಕೇಳುತ್ತದೆ। ಆದರೆ ದೀರ್ಘದರ್ಶಿಯಾದ ಯೋನಾನೆಂಬವನ ಅದ್ಭುತವನ್ನು ವಿನಾಯಿಸಿ ಅವರಿಗೆ ಬೇರೊಂದು ಕೊಡಲ್ಪಡುವದಿಲ್ಲ। ಹೇಗಂದರೆ ಮೀನಿನ ಹೊಟ್ಟೆಯಲ್ಲಿ ಯೋನಾನೆಂಬವನು ಮೂರು ಹಗಲು ಮೂರು ರಾತ್ರಿ ಇದ್ದ ಮೇರೆಗೆ ನರಮಗನು ಭೂಗರ್ಭದಲ್ಲಿಯಿರುವರು। ನಿನಿವಿತರು ಈ ಸಂತತಿಗೆ ವಿರೋಧವಾಗಿ ನ್ಯಾಯನಿರ್ಣಯದ ದಿವಸದಲ್ಲಿ ಎದ್ದು ಇವರ ಮೇಲೆ ತಪ್ಪು ಹೊರಿಸುವರು। ಯಾಕೆಂದರೆ ಯೋನಾನೆಂಬವನು ಅವರಿಗೆ ಪ್ರಸಂಗಿಸಿದ್ದಲ್ಲಿ ಪಶ್ಚಾತ್ತಾಪವಂನು ಪಟ್ಟರು। ಸರ್ವೇಶ್ವರನ ಮಗನಾದರೆ ಯೋನಾನೆಂಬವನಿಗಿಂತಾ ಮೇಲಾದವರಾಗಿದ್ದಾರೆ। ಸಾಬ ಎಂಬ ದೇಶದ ರಾಣಿಯು ಈ ಸಂತತಿಯ ಮೇಲೆ ತಪ್ಪು ಹೊರಿಸುವಳು। ಯಾಕೆಂದರೆ ಅವಳು ಸಲೋಮೋನನ ಜ್ಞಾನವನ್ನು ಕೇಳ ಭೂಮಿಯ ಕಡೆಕಡೆಗಳಿಂದ ಬಂದಳು। ಸರ್ವೇಶ್ವರನ ಕೊಮಾರನೋ ಸಲೋಮೋನೆಂಬವನಿಗಿಂತಾ ಅಧಿಕ ದೊಡ್ಡವರಾಗಿದ್ದಾರೆ। ಹೀಗಿದ್ದು ದೇವರ ಜ್ಞಾನವಾಗಿರುವ ಯೇಸುನಾಥರು ಜೂಡೆಯರ ಕಂಜಾರ ಎಣಿಸ ಕೂಡದ ಅದ್ಭುತಗಳನ್ನು ಮಾಡಿಕೊಂಡು ಬರಲಾಗಿ ಇವರು ಆ ದಿವ್ಯ ಬೋಧಕರಲ್ಲಿ ವಿಶ್ವಾಸಿಸದೆ ನಿಂದಿಸಿದಪರಿಂದ ಅವರಿಗೆ ಎಂಥಾ ತೀರ್ಪುಯುಂಟಾದೀತು। ಕೊರೊಜಯೀನ ಎಂಬ ಪುರವೇ ನಿನಗೆ ಹೋಸ। ಬೆತ್ಸಯಿದವೆಂಬ ಪುರವೇ ನಿನಗೆ ಹೋಸ। ಯಾಕೆಂ

ದರೆ ನಿಂಮಲ್ಲಿ ಮಾಡಲ್ಪಟ್ಟಂಥಾ ಅದ್ಭುತಗಳು ತೀರ್ ಸಿದೋನೆಂಬ ಪಟ್ಟಣಗಳಲ್ಲಿ ಮಾಡಲ್ಪಟ್ಟಿದ್ದರೆ ಆಗಲು ತಪವಸ್ತ್ರದಲ್ಲಿಯೂ ಬೂದಿಯಲ್ಲಿಯೂ ತಪಸ್ಸನ್ನು ಮಾಡಿ ಇದ್ದಿರುವರು। ಹೀಗಿದ್ದು ನಿಮಗೆ ಹೇಳುತ್ತೇನೆ ನ್ಯಾಯ ನಿರ್ಣಯದ ದಿವಸದಲ್ಲಿ ನಿಮಗಿಂತಾ ತೀರಿಗೂ ಸಿದೋನಿಗೂ ಲೇಸಾದ ಶಿಕ್ಷೆ ಆದೀತು। ಅಶುದ್ಧ ಭೂತವು ಒಬ್ಬ ಮನುಷ್ಯನನ್ನು ಬಿಟ್ಟುಹೊರಟಾಗ ಒಣ ಭೂಮಿಯ ಮೇಲೆ ನಡೆಯುತ್ತಾ ವಿಶ್ರಮವಂನು ಹುಡುಕುತ್ತದೆ। ಆದರೆ ತನಗೆ ದೊರಕದೆ ಇರುವ ಕಾರಣ ಅದು ಅಂನುವದೇನಂದರೆ। ನಾನು ಹೊರಟು ಬಂದ ನಂನ ಮನೆಗೆ ತಿರಿಗಿ ಹೋಗುವೆ ಎಂದು ಹೇಳಿ ಬಂದು ನೋಡುವಾಗ ಅದು ಶುದ್ಧವಾಗಿಯೂ ಶೃಂಗರಿಸಲ್ಪಟ್ಟದ್ದಾಗಿಯೂ ಇರುವದಂನು ಕಾಣುತ್ತದೆ। ಆಗ ತನಗಿಂತಾ ಅಧಿಕ ಭ್ರಷ್ಟವಾದ ಏಳು ಅಶುದ್ಧ ಭೂತಗಳ ಒಡಗೊಂಡು ಆ ಮನುಷ್ಯನಲ್ಲಿ ಹೊಕ್ಕು ಅವನ ಬಳಿಗೆ ವಾಸಿಸುವವು। ಮತ್ತು ಆ ಮನುಷ್ಯನ ಮುಂದಿನ ಸ್ಥಿತಿಗಿಂತ ಹಿಂದಿನ ಸ್ಥಿತಿಯು ಅಧಿಕ ಕೆಟ್ಟದ್ದಾಗಿರುತ್ತದೆ। ಈ ಭ್ರಷ್ಟ ಸಂತತಿಗೆ ಹೀಗೆ ಆದೀತು ಎಂದು ಪಾಲಿಸಿದರು॥

ಸಂದಣಿಗೆಯಂನು ಸ್ವಾಮಿಗಳು ಮಾತನಾಡಲಾಗಿ ಇಗೋ ಅವರ ತಾಯ್ಯೂ ಅವರ ಬಂಧು ಮಿತ್ರರೂ ಅವರ ಸಂಗಡ ಮಾತನಾಡಬೇಕೆಂಬದಾಗಿ ಹೊರಗೆ ನಿಂತಿದ್ದರು । ಆಗಲು ಕೆಲವರು ಹೇಳಿದ್ದು । ಸ್ವಾಮೀ ಇಗೋ ನಿಂಮ ಮಾತೆ ಸ್ತ್ರೀಯ್ಯೂ ನಿಂಮ ಸಹೋದರರೂ ನಿಂಮಂನು ಹುಡುಕುತ್ತಾರೆಂದರು ಅದರೆ ಸ್ವಾಮಿಗಳು ಪಾಲಿಸಿದ್ದು। ನಂಮ ತಾಯ್ಯಾರು। ನಂಮ ಸಹೋದರರ್ಯಾರು। ನಂನ ದೇವ ಸ್ವಭಾವದ ಪ್ರಕಾರಕ್ಕೆ ನಮಗೆ ತಾಯ್ಯೂ ಇಲ್ಲಾ। ಸಹೋದರರೂ ಇಲ್ಲಾ । ಪರಲೋಕದಲ್ಲಿರುವಂಥಾ ನಂಮ ಪಿತನಾದವರ ಚಿತ್ತವಂನು ನೆರವೇರಿಸಿ ಇರುವವರ್ಯಾರೋ ಅವರೇ ನನ ಸಹೋದರನೂ ಸಹೋದರಿಯೂ ತಾಯಿಯೂ ಆಗಿರುತ್ತಾರೆ। ಅಂಥವರಂನೇ ಅತಿಶಯವಾಗಿ ಸ್ನೇಹಿಸುವೆವು। ಯಾಕೆಂದರೆ ನರಜನ್ಮದ ಪ್ರಕಾರಕ್ಕೆ ನಮಗಿರುವ ಬಂಧು ಮಿತ್ರರು ಅವಿಶ್ವಾಸಿಗಳಾದರೆ ಹ್ಯಾಗೆ ತಳ್ಳಲ್ಪಡುವಿರೋ ಅದೇ ಪ್ರಕಾರ ನಂಮಂನು ವಿಶ್ವಾಸಿಸಿ ನಂಮ ಕಲ್ಪನೆ ಅನು

ಸೇರಿಸಿ ಕೊಳ್ಳುವಂಥ ಅನ್ಯಾಯ ನಂಮಿಂದ ಅಂಗೀಕರಿಸಲ್ಪಡುವದಲ್ಲದೆ ಮತ್ತು ನಂಮ ತಾಯಿ ತಂದೆಗಳಹಾಗೆ ಸ್ನೇಹಿಸಲ್ಪಡುವರು ಎಂಬದಾಗಿ ಪಾಲಿಸಿದರು॥

---

ಕ್ರೀಸ್ತುವರುಗಳಿರಾ ನಂಮ ದಿವ್ಯ ರಕ್ಷಕರು ನಯಿಮ್ ಎಂಬ ಪಟ್ಟಣವನ್ನು ಪ್ರವೇಶಿಸುತ್ತಿರಲಾಗಿ ಪ್ರೇತ ಕರ್ಮ ಮಾಡುವವರ ಗುಂಪು ಅವರಿಗೆ ಎದುರಾಗಿ ಬಂತೆಂಬದಾಗಿ ನೀವು ಕೇಳಿದಿರಿ ಯಲ್ಲ। ಆ ಸತ್ತು ಹೋದಂಥವನ್ಯಾರೆಂದು ಕೇಳಿದಿರಾದರೆ ಅವನು ಒಬ್ಬ ವಿಧವೆ ಸ್ತ್ರೀಯ ಏಕ ಮಗನಾಗಿಯೂ ಇನ್ನು ಸಣ್ಣ ಪ್ರಾಯವುಳ್ಳವನಾಗಿಯೂ ಇದ್ದ ಮನುಷ್ಯನು। ಪ್ರಾಯವು ಪುಷ್ಟಿಯೆಂದೂ ಅಂತಸ್ತು ಅವಸರ ಮೊದಲಾದ ಬೇರೆ ಬೇರೆ ವಿಶೇಷಗಳನ್ನು ಮರಣವಾದದ್ದು ನೋಡದೆ ಯಾವ್ಯಾವ ಪ್ರಾಯ ಸ್ಥಿತಿ ಉದ್ಯೋಗದ ಮನುಷ್ಯರೆಲ್ಲರನ್ನು ಸರಿಸಮವಾಗಿ ಹಾನಿ ಮಾಡುತ್ತಾ ಬರುವದೆಂದು ಮೇಲೆ ಹೇಳಿದ ವರ್ತಮಾನದಿಂದ ನೀವು ಕಂಡು ಕೊಳ್ಳತಕ್ಕದ್ದಾಗಿದೆ। ಈ ಲೋಕದಲ್ಲಿರುವಂಥಾ ಮನುಷ್ಯರೆಲ್ಲರು ಮರಣದ ಪರಿಯಂತರಕ್ಕೂ ಧರ್ಮ ದಾರಿಯಲ್ಲಿ ನಡೆಯುವದಕ್ಕೋಸ್ಕರ ಯಾವಾಗಲೂ ಮರಣದ ಸ್ಮರಣೆ ಮಾಡ ಬೇಕೆಂಬ ಉಪಾಯಕ್ಕಿಂತ ಉತ್ತಮವಾದ ಮತ್ತೊಂದು ಉಪಾಯವಿಲ್ಲವು। ಸಾವು ಯಾವಾಗ ಬರುವದೆಂದೂ ಯಾವ ವರುಷ ವಾರ ದಿನ ಕ್ಷಣವೆಂದೂ ಯಾವ ಸ್ಥಳದಲ್ಲಿ ಎಂದೂ ಅನೇಕ ದಿವಸಗಳು ಕಳಿಸಿದ ಮೇಲೆಯೋ ಯಿಲ್ಲವೇ ಯಿದ್ದಕ್ಕಿದ್ದಹಾಗೆಯೋ ಪಾಪದೊಳಗಿರುವಾಗಲೋ ಅಥವಾ ಪಾಪವಿಲ್ಲದ ತರುಣದಲ್ಲಿಯೋ ಹ್ಯಾಗೆ ಬರುವದೋ ಎಂದು ನಾವು ಬಲ್ಲವರಲ್ಲವು। ಸಾಯ ಬೇಕೆಂಬುವದೆ ನಿರ್ಣಯವಾದ ಕಾರ್ಯವು। ಆದರೆ ಮಿಕ್ಕಾದ ವಿಶೇಷಗಳು ಸಂದೇಹವಾಗಿರುತ್ತವೆ। ಹೀಗಿರಲಾಗಿ ಅನೇಕ ಮಂದಿಗಳು ನೆನಸದೆ ಇರುವಂಥಾ ಸಮಯದಲ್ಲಿಯೇ ಅವರಿಗೆ ಸಾವು ಆಕಸ್ಮಿಕವಾಗಿ ಸಂಭವಿಸುವದು॥

ಮತ್ತು ಸಾಯುವಂಥವನು ತನಗುಂಟಾಗಿರುವ ವಸ್ತುಗಳೆಲ್ಲಾ ಬಿಟ್ಟು ಹೋಗುವದಲ್ಲದೆ ಮಹಾ ಸ್ನೇಹವಾಗಿದ್ದಂಥಾ ಶರೀರವನ್ನು ಆತ್ಮವು ಅಗಲಿ

ಹೋಗುವ ಸಮಯದಲ್ಲಿ ಮನುಷ್ಯನಿಗೆ ಮಹಾ ಕಸ್ತಿಯೂ ದುಃಖವೂ ವುಂಟಾಗುವದು। ಅದು ಹ್ಯಾಗಂದರೆ ವೊಬ್ಬನು ಹುಟ್ಟಿ ಬೆಳದ ಪಟ್ಣದ ಲ್ಲಿರುವದಕ್ಕೆ ಅವಕಾಶವಿಲ್ಲದೆ ಬೇರೆ ರಾಜ್ಯಕ್ಕೆ ತಗುಳಲ್ಪಟ್ಟರೆ ಆಗ ಅವ ನಿಗೆ ಎಷ್ಟು ವ್ಯಾಕುಲ ದುಃಖವುಂಟಾಗಿರುವದು। ಆದರೆ ಅವನಿಗುಂಟಾ ಗಿದ್ದ ಒಡವೆಗಳೊಳಗೆ ಸ್ವಲ್ಪವಾದರೂ ಕೊಂಡು ಹೋಗುವದಕ್ಕೆ ಒಂದು ವೇಳೆ ಅಪ್ಪಣೆಯಾಗ ಬಹುದು। ಸತ್ತು ಹೋಗುವಂಥವನಿಗೆ ಹಾಗೆ ಸಂತ ವಿಸದೆ ಭೂಲೋಕದಲ್ಲಿ ತನಗುಂಟಾಗಿದ್ದ ವಡವೆ ವಸ್ತು ಭೂಮಿ ಮನೆ ತಂದೆ ತಾಯಿ ಹೆಂಡತಿ ಮಕ್ಕಳು ನೆಂಟರಿಷ್ಟರು ಬಂಧುಮಿತ್ರಾದಿಗಳು ಯೀ ಮೊದ ಲಾದ ವಸ್ತುಗಳೆಲ್ಲಾ ಬಿಟ್ಟು ಹೋಗ ಬೇಕಾಗಿರುವದು । ಅವುಗಳೊಳಗೆ ವೊಂದಂನಾದರೂ ಯಿರಿಸಿ ಕಾಪಾಡುವದಕ್ಕೆ ಎಷ್ಟುಮಾತ್ರ ಅವಕಾಶ ವಿಲ್ಲವು॥

ಇದಲ್ಲದೆ ಆತ್ಮವು ಶರೀರವಂನು ಬಿಟ್ಟು ಹೋದಾಕ್ಷಣವೇ ಒಂದಿಷ್ಟು ಹೊತ್ತಾದರೂ ಆ ಶರೀರವಂನು ಮನೆಯಲ್ಲಿ ಯಿರಗೊಡಿಸದೆ ಶೀಘ್ರದಲ್ಲಿ ಅದಂನು ಹೊರಗೆ ವೈಯ್ಯುವದಕ್ಕೆ ಬಂಧುಮಿತ್ರಾದಿಗಳು ಆಯಿತ್ತ ಮಾಡು ತ್ತಿದ್ದಾರೆ। ಈ ಶರೀರವು ಒಳ್ಳೇ ವಸ್ತ್ರಗಳಂನೂ ಅಪರೂಪವಾದ ಭೂಷಣ ಗಳಂನೂ ಧರಿಸಿಕೊಂಡಿದ್ದಾಗ್ಯೂ ಅವೆಲ್ಲಾಂನು ಕಿತ್ತು ಹಾಕಿ ಮೂರುವರೆ ಮೊಳದ ಹಳ್ಳದೊಳಗೆ ಆ ಶರೀರವಂನು ಯಿಳಿಸಿ ಮಂಣಿನಿಂದಲು ಮುಚ್ಚಿ ಕಾಲುಗಳಿಂದ ತುಳಿಯುವರು। ಅವನು ಎಷ್ಟು ಧೊರೆತನವುಳ್ಳವನಾದರೂ ಯೆಷ್ಟು ಪರಾಕ್ರಮವುಳ್ಳವನಾದರೂ, ಯಿಂಥಾ ಬಹುಮಾನವು ಆಗುವದೇ ಹೊರತು ಮತ್ತೊಂದಲ್ಲ॥

ಇದಲ್ಲದೆ ಸಾಯ ಹೋಗುವಂಥವನು ಸರ್ವೇಶ್ವರನ ಮಿತಿಯಿಲ್ಲದ ದಯವಂನು ಯೋಚಿಸಿ ನಂಬಿಕೊಂಡಿದ್ದಾಗ್ಯೂ ತಾನು ಮಾಡಿದ ಘನವಾದ ಪಾಪಗಳಂನು ನೆನಸುವಾಗ ಭಯ ಪಡುವದಕ್ಕೆ ಎಡೆಯಾಗಿರುವದು। ಸಷ್ಟೀ ಷ್ಟರನು ಮಾಡುವಂಥಾ ನ್ಯಾಯ ನಿರ್ಣಯದ ರಹಸ್ಯಗಳಂನು ತಿಳಿಯದೆ ಯಿರುವ ಕಾರಣ ಬಹಳವಾಗಿ ತತ್ತಳಿಸುವನು। ಅದು ಹ್ಯಾಗೆಂದರೆ ಆತ್ಮವು ಶರೀರವಂನು ಬಿಟ್ಟು ಹೋದ ಕ್ಷಣದಲ್ಲಿ ಸರ್ವೇಶ್ವರನಂನು ಕಂಡು ಮಿತಿ

ಯಿಲ್ಲದ ಭಾಗ್ಯವಂನು ಪಡೆಯುವನೋ ಯಿಲ್ಲವೇ ನರಕದ ವೇಧನೆ ಯೊಳಗೆ ಬಿದ್ದು ಮುಣಿಗಿ ಹೋಗುವನೋ ಯೇನೋ ಯೆಂಬುವದು ಅವನಿಗೆ ನಿಶ್ಚಯವಾಗಿ ತಿಳಿಯದು। ಮತ್ತು ತಾನು ಮಾಡಿದ ದ್ರೋಹಗಳಂನು ವೊಂದಾದರೂ ತಪ್ಪದೆ ಲೆಖ್ಖವ ಹೇಳ ಬೇಕಾಗಿರುವದೆಂದು ನೆನಸುವಾಗ ಅಂಥಾ ಸಮಯದಲ್ಲಿ ಮನುಷ್ಯನಿಗೆ ಬರುವಂಥಾ ಚಿಂತೆ ಭಯ ದುಃಖ ಯಿಷ್ಟೆಂದು ಹೇಳ ಕೂಡದು। ಹಾಗೆಯೇ ಅನೇಕ ವರುಷ ಕಾಲದಿಂದ ವನಾಂತರದಲ್ಲಿ ತಪಸ್ಸು ಮಾಡಿಕೊಂಡಿದ್ದ ಅಬ್ಬಃ ಅರ್ಸೇನಿಯುಸ್ಸೆಂಬವರು ಸಾಯುವ ಸಮಯದಲ್ಲಿ ಬಹು ಭಯ ಭ್ರಾಂತರಾಗಿರಲಾಗಿ ಸಮೀಪದಲ್ಲಿದ್ದಂಥಾ ಶಿಷ್ಯರು ಅವರಂನು ನೋಡಿ। ದೇವರವರೆ ಇಂದಿನವರಿಗೂ ವುಗ್ರ ತಪಸ್ಸು ಮಾಡಿಕೊಂಡಿದ್ದಿರಲ್ಲಾ। ಹೀಗಿರುವಲ್ಲಿ ತಾವು ಸಾಯುವಂಥಾ ಸಮಯದಲ್ಲಿ ಅಷ್ಟು ಭಯ ಪಡುವದಕ್ಕೆ ಕಾರಣವೇನೆಂದು ಅವರಂನು ಕೇಳಿದರು ಅದಕ್ಕೆ ಅರ್ಸೇನಿಯುಸೆಂಬವರು। ಕುಮಾರರುಗಳಿರಾ ಯೀ ಭಯವು ಯೀಗ ಮಾತ್ರ ವಲ್ಲ ನಾನು ಬುದ್ಧಿಯರಿತಾರಭ್ಯದಿಂದ ಯಾವಾಗಲು ಯೀ ಭಯದೊಂದಿಗೆ ಯಿದ್ದು ಕೊಂಡಿದ್ದೇನೆಂದು ಪ್ರತ್ಯುತ್ತರವಾಗಿ ಹೇಳಿದರು॥

ಆದ್ದರಿಂದ ಕ್ರೀಸ್ತುವರುಗಳಿರಾ ಬುದ್ಧಿಯೆಂಬ ಕಂಣು ತೆರದು ನೋಡಿರಿ। ನಿದ್ರೆ ಮಾಡದೆ ಯೆಚ್ಚರವಾಗಿರ್ರಿ। ಯಾಕೆಂದರೆ ನಿಂಮ ಕರ್ತರು ಯಾವಾಗ ಬರುವರೋ ಯೆಂದು ವೊಬ್ಬನಿಗಾದರೂ ತಿಳಿಯದು। ಅದಕ್ಕೆ ದೃಷ್ಟಾಂತವಾಗಿ ನಾವು ಹೇಳ ಹೋಗುವ ವುಪಮಾನವಂನು ಕೇಳಿರಿ। ಒಬ್ಬ ಮನುಷ್ಯನು ಮತೊಬ್ಬನಿಗೆ ಶಾಸನವಂನು ಮಾಡಿಸಿದನು। ಆಗಲು ಕರೆಯಲ್ಪಟ್ಟವನು ಪಂಕ್ತಿಯಲ್ಲಿ ಕುಳಿತಿರುವ ಸಮಯದಲ್ಲಿ ತನಗೆ ಬಡಿಸಲ್ಪಟ್ಟ ಇಪ್ಪತ್ತು ಮೂವತ್ತು ದಿನಸ್ಸಿನ ಪದಾರ್ಥಗಳೊಳಗೆ ಒಂದರಲ್ಲಿ ವಿಷ ವುಂಟೆಂಬದಾಗಿ ಅವನಿಗೆ ತಿಳಿಯ ಬಂತು। ಆದರೂ ಯಾವ ಪದಾರ್ಥದಲ್ಲಿ ವಿಷ ವುಂಟೆಂಬ ನಿಜವಂನು ತಿಳಿಯದೆ ಯಿದ್ದನು। ಇಂಥಾ ಮನುಷ್ಯನಿಗೆಷ್ಟು ಹಸಿವೆ ವುಂಟಾಗಿದ್ದರೂ ವೊಂದು ಮೇಲೋಗರದಲ್ಲಿ ವಿಷವುಂಟಾಗಿರುವದರಿಂದ ಕಡೆಮೆ ಪದಾರ್ಥಗಳ ಮುಟ್ಟದೇ ಹೋದನು। ಯಿದೇ ಮೇರೆಗೆ ಒಂದು ವರುಷದಲ್ಲಿ ಸತ್ತು ಹೋಗುವರಿ ಯೆಂಬಂಥಾದ್ದು ಅರಿತಿದ್ದೀರಿಯಲ್ಲಾ

ಹಾಗೆ ಅರಿತಿರುವಲ್ಲಿ ವೊಂದೊಂದು ವರುಷಕ್ಕೂ ಕ್ಷಮ ಪಟ್ಟುಯಿರಬ್ಯಾಡವೋ? ಸದರಿ ಮನುಷ್ಯನು ಕ್ಷುಧೆಯಾಗಿದ್ದಾಗ್ಯೂ ಒಂದು ಪದಾರ್ಥದಲ್ಲಿ ವಿಷವುಂಟಾದ ಕಾರಣದಿಂದ ಮಿಕ್ಕಾದ ಪದಾರ್ಥಗಳಂನು ಮುಟ್ಟದೆ ಹೋದನಲ್ಲವೇ। ಹಾಗೆಯೇ ವೊಂದು ವರುಷದಲ್ಲಿ ಸತ್ತು ಹೋಗುವೆನೆಂದು ನೀನು ತಿಳಿದು ಅದಕ್ಕೆ ಕ್ಷಮ ಪಡದೆ ಇರುವದೇನು? ಮತ್ತು ಇದಂನು ಕುರಿತು ಬೇರೊಂದು ನ್ಯಾಯದಿಂದ ದೃಷ್ಟಾಂತ ಪಡಿಸ ಬಹುದು। ಏನಂದರೆ ಒಂದು ಕೋಟೆಯುಳ್ಳಿರುವಂಥಾ ಜನರು ಎಚ್ಚರಿಕೆ ತಪ್ಪದೆ ಜಾಗ್ರತೆಯಿಂದ ಇರುವರಲ್ಲವೋ ಯಾತಕ್ಕೆಂದರೆ ಯಾವ ಸಮಯದಲ್ಲಿ ಶತ್ರುಗಳು ಬಂದು ಕೋಟೆಗೆ ಮುತ್ತಿಗೆಯಂನು ಹಾಕುವರೆಂದು ತಿಳಿಯದೆ ಇರುವ ಕಾರಣ ಯಾವಾಗಲು ಜಾಗ್ರತೆಯುಳ್ಳಿರುವರು। ಹಾಗೆಯೇ ನಿಮಗೆ ಶತ್ರುವಾಗಿರುವ ಸಾವು ಯಾವ ಸಮಯದಲ್ಲಿ ಬರುವದೆಂದು ಅರಿಯದೆ ಇರುವದರಿಂದ ನೀವು ಯಾವಾಗಲು ಆಯುತ್ತನಾಗಿ ಇರಬೇಕಾಗಿರುತ್ತದೆ। ಈ ದಿನದಲ್ಲಿ ವೊಬ್ಬ ಬಾಲಕನು ಚಂದವೂ ಸೌಂದರ್ಯವೂ ಉಳ್ಳವನಾಗಿರುವನು। ಇಂಥವನಿಗೆ ಜ್ವರ ಬಂದರೆ ಮಾರನೆ ದಿವಸದಲ್ಲಿ ಅವನ ರೂಪು ಲಾವಣ್ಯವೆಲ್ಲಾ ಕೆಟ್ಟು ಹೋಗಿ ಅವನ ರಕ್ತನಾದ್ಯಂತವು ಸತ್ತು ವಿಶೇಧವಾಗಿ ಕಾಣಿಸುವನು। ನಂಮ ಜೀವವು ಮರಳಿನ ಮೇಲೆ ಕಟ್ಟಿದ ಗೋಪುರದಹಾಗಿದೆ। ಘಾಳಿ ಬೀಸಿ ಮಳೆ ಸುರಿಸಿ ಮರಳು ಕುಂಗಿ ಹೋಗಿ ಆ ಗೋಪುರವು ಕುಸಿ ಬಿದ್ದು ಹೋಗುವದು॥

ಆದ್ದರಿಂದ ಕ್ರೀಸ್ತುವರುಗಳಿರಾ ನಿಂಮ ಮನಸ್ಸಿನಲ್ಲಿ ಮರಣ ಸ್ಮರಣೆಯಂನು ಯಾವಾಗ್ಯೂ ಇರಿಸಿಕೊಂಡು ಬಂದರೆ ಪಾಪವಂನು ವರ್ಜಿಸುವದಕ್ಕೆ ಅದೇ ಉತ್ತಮ ಉಪಾಯವಾಗಿರುವದು। ಮರಣಕ್ಕೆ ಕ್ಷಮ ಪಡಬೇಕೆಂಬ ವಿಶೇಷವಾದ ಕಾರಣವು ಯಾವದೆಂದರೆ ಮರಣವಾದದ್ದು ಒಂದೇ ಸಾರಿ ಮಾತ್ರ ಬರುವದಲ್ಲದೆ ಅನೇಕಾವರ್ತಿ ಬರುವದಿಲ್ಲವು। ಸರ್ವೇಶ್ವರನು ಮನುಷ್ಯರಿಗೆ ಎರಡು ನೇತ್ರಗಳಂನು ದಯಪಾಲಿಸಿದ್ದಾರೆ। ಅವುಗಳೊಳಗೆ ವೊಂದು ಕಂಣು ಹೋದರೆ ಬೇರೆ ವೊಂದೇ ಕಂಣಿನಿಂದ ದೃಷ್ಟಿಸಿ ಬದುಕ ಬಹುದು। ಆದರೆ ಮನುಷ್ಯರಿಗೆ ಸಾವು ವೊಂದಾವರ್ತಿ ಮಾತ್ರ ಪ್ರಾಪ್ತಿಸುವದೆಂದು ಸರ್ವೇಶ್ವರನು ಕಟ್ಟಳೆ ಮಾಡಿದರು। ಒಳ್ಳೇ ಆಯುತ್ತದೊಂದಿಗೆ

ಸತ್ತು ಹೋದರೆ ಯೆಂದೆಂದಿಗೂ ಸಂತೋಷವಾಗಿರುವದಕ್ಕೆ ಅವಕಾಶವುಂಟು। ಅಲ್ಲದ ಸಾವು ಬಂದರೆ ಯೆಂದೆಂದಿಗೂ ನರಕದ ಅಗ್ನಿಯಲ್ಲಿ ಬಿದ್ದಿರ ಬೇಕಾಗಿರುವದು। ಅಂಥಾ ಅಗ್ನಿಯಂನು ತಪ್ಪಿಸಿಕೊಳ್ಳುವದಕ್ಕೆ ಪಾಪವಂನು ಪೂರ್ಣ ಮನಸ್ಸಿನಿಂದ ವಿಸರ್ಜಿಸಿ ಬಿಟ್ಟು ಸರ್ವೇಶ್ವರನ ಕಟ್ಟಳೆಗಳಂನು ಸುಮುದ್ರೆಯಾಗಿ ಅನುಸರಿಸಿಕೊಂಡು ಬಂದರೆ ಮರಣದ ಅವಸ್ಥೆಯಲ್ಲಿ ಸರ್ವೇಶ್ವರನ ಸಹಾಯದಿಂದ ಒಳ್ಳೇ ಆಯುತ್ತವು ಪ್ರಾಪ್ತಿಸುವದೆಂದು ನಂಬಿಕೊಳ್ಳುವಿರಾಗಲಿ॥



## ೧೧ ನೇ ಅಧ್ಯಾಯವು॥



### ಸ್ವಾಮಿಯವರು ಮಾಡಿದ ಕೆಲ ವಿಶೇಷಗಳ ಕುರಿತು॥

ತರುವಾಯ ತಾವು ಸಾಕಲ್ಪಟ್ಟು ಬೆಳದಿದ್ದಂಥ ನಜರೆತೆಂಬ ಊರಿಗೆ ಸ್ವಾಮಿಗಳು ತಂಮ ಶಿಷ್ಯರೊಂದಿಗೆ ಬಂದರು। ಆದರೆ ಸಬ್ಬಾತು ದಿವಸ ಬರಲಾಗಿ ತಂಮ ಪದ್ಧತಿಯ ಮೇರೆಗೆ ಸಿನಗೋಗಂನು ಪ್ರವೇಶಿಸಿ ಜನರಿಗೆ ಬೋಧಿಸ ತೊಡಗಿದರು। ಆಗಲು ದೀರ್ಘದರ್ಶಿಯಾದ ಇಜಯಾಸೆಂಬವರ ಪುಸ್ತಕವು ಅವರಿಗೆ ವೊಪ್ಪಿಸಲ್ಪಡಲಾಗಿ ಸ್ವಾಮಿಗಳು ಯೆದ್ದು ಆ ಪುಸ್ತಕದಲ್ಲಿ ಓದಿದ್ದೇನಂದರೆ। ಸ್ಪಿರಿತುಸಾಂಕ್ತು ನಂಮ ಮೇಲೆ ಚಿತ್ತೈಸಿ ನಿಂತಿದ್ದಾರೆ। ಗರೀಬರಿಗೆ ದೇವ ವಾಕ್ಯವಂನು ಪ್ರಸಂಗಿಸಲೂ ದುಃಖಿತರಿಗೆ ವುಪಶಾಂತಿ ಹೇಳಲೂ ಕುರುಡರಿಗೆ ದೃಷ್ಟಿಯಂನು ಕೊಡಲೂ ಸೆರೆಯವರಿಗೆ ಬಿಡುಗಡೆಯಂನೂ ಸರ್ವೇಶ್ವರನಿಗೆ ಅಂಗೀಕರವಾದ ಕಾಲವಂನೂ ಎಲ್ಲರಿಗೆ ತಿಳಿಸು ಪಡಿಸಲೂ ನಂಮಂನು ಕಳುಹಿಸಿದ್ದಾರೆ ಯೆಂದು ವೋದಿದರು। ಆದರೆ ಆ ಪುಸ್ತಕವಂನು ಸುರುಳು ಮಾಡಿದ ಮೇಲೆ ಅದಂನು ಸೇವಕನ ಕೈಗೆ ತಿರಿಗಿ ಕೊಟ್ಟು ಕುಳಿತುಕೊಂಡರು। ಮತ್ತು ಸರ್ವರೂ ತಂಮ ಕಣ್ಣುಗಳ ಅವರ ಮೇಲೆ ಇಟ್ಟು ಬಹು ಘನವಾಗಿ ಕೇಳುತ್ತಿದ್ದರು।

ಆಗ ಸ್ವಾಮಿಯವರು ಅವರ ನೋಡಿ ಹೇಳ ತೊಡಗಿದ್ದೇನಂದರೆ। ನೀವೀಗ ಕೇಳಿದ ವೇದಾಗಮದ ವಚನವು ಯಿಂದಿನಲ್ಲೇ ನೆರವೇರಿತು। ಏನಂದರೆ ಕ್ರೀಸ್ತುನಾಥರು ಚಿತ್ತೈಸಿ ಬಂದು ರೋಗಿಷ್ಟರಿಗೆ ಪರಿಹರವಂನು ದುಃಖಿತರಿತರಿಗೆ ಉಪಶಾಂತಿಯಂನೂ ದಯ ಪಾಲಿಸುವದಲ್ಲದೆ ಮತ್ತೂ ಪಾಪದ ದಾಸತ್ವದಲ್ಲಿ ಬಿದ್ದಿರುವ ನರಮಕ್ಕಳಂನು ರಕ್ಷಿಸಿ ಅವರಿಗೆ ಹೊಸ ಕೂಡದ ಅನುಗ್ರಹಗಳಂನು ದಯ ಪಾಲಿಸುತ್ತಾರೆ ಎಂದು ಹೇಳಿದರು। ಇದನ್ನು ಕೇಳಿದಂಥಾ ಸರ್ವರೂ ಮೊದಲು ಆಶ್ಚರ್ಯವ ಪಟ್ಟು ಅವರ ಬೋಧನೆಯಂನು ಬಹು ಮೆಚ್ಚುತ್ತಾ ಇದ್ದರು। ಆದರೆ ಹೊಟ್ಟೆಕಿಚ್ಚುಳ್ಳ ಕೆಲಬರು ಅಂದದ್ದೇನಂದರೆ। ಈ ಮಹಾ ಜ್ಞಾನವು ಯಿವನಿಗೆ ಯೆಲ್ಲಿಂದ ಬಂತು ? ಇವನ ಕೈಯ್ಯಗಳಿಂದ ಆಗುವಂಥ ಅದ್ಭುತಗಳು ಯೆಲ್ಲಿಂದ ಬಂದವು ? ಯಿವನು ಜೋಸೆಫೆಂಬ ಹೆಸರುಳ್ಳ ಬಡಿಗೆಯವನ ಮಗನಲ್ಲವೋ ? ಇವನು ಜಾಕೋಬ್ ಜೋಸೆಫ್ ಜೂದ ಸಿಮೋನ್ ಯೆಂಬವರ ಸಹೋದರನಲ್ಲವೇ ? ಯಿವನ ಸಹೋದರಿಗಳೆಲ್ಲರೂ ನಂಮ ಬಳಿಯಲ್ಲಿ ಇದ್ಧಾರಲ್ಲವೋ ? ಹೀಗಿದ್ದು ಇವುಗಳೆಲ್ಲಾ ಇವನಿಗೆ ಯೆಲ್ಲಿಂದ ಬಂದವು ಯೆಂಥೇಳಿ ಅವಗು ಮೇಲೆ ಸಿಟ್ಟು ಮಾಡುತ್ತಿದ್ದರು। ಆದರೆ ತಂಮ ಸ್ವಕೀಯರು ಜೇಸುನಾಥರ ಅಂತಸ್ತಿನ ಕೀರ್ತಿ ರವಂನು ನಿಂದಿಸುತ್ತಾ ಇವರು ವಿಶ್ವಾಸಿಸದೆ ಇದ್ದ ಕಾರಣ ಸ್ವಾಮಿಯಿವರು ನಜರೆತೆಂಬ ಊರಿನಲ್ಲಿ ಕೆಲವು ಅದ್ಭುತಗಳಂನು ಮಾತ್ರವೇ ಮಾಡುತ್ತಿದ್ದರು। ಈ ಕಾರಣ ಅವರ ಸಂಗಡ ಹೇಳಿದ್ದೇನಂದರೆ। ತನ ಜನ್ಮ ಶೀಮೆಯಲ್ಲಿ ಯಾವ ದೀರ್ಘದರ್ಶಿಯಾದರೂ ಅಂಗೀಕರವಾಗುವದಿಲ್ಲ । ನಿಶ್ಚಯವಾಗಿ ನಿಮಗೆ ಹೇಳುತ್ತೇವೆ ದೀರ್ಘದರ್ಶಿಯಾದ ಎಲಿಯಾಸೆಂಬವನ ಕಾಲದಲ್ಲಿ ಮೂರು ವರುಷಗಳ ಪರಿಯಂತ್ರ ಆಕಾಶವು ಮುಚ್ಚಿ ಮಳೆ ಯಿಲ್ಲದೆ ಬರ ಕಾಲವು ಹೆಚ್ಚ ಹೆಚ್ಚುತ್ತಾ ಇಜ್ರಾಯೇಲಿನಲ್ಲಿ ಅನೇಕ ವಿಧವೆಸ್ತ್ರೀಯ್ಯರು ಇದ್ದಾಗ್ಯೂ ಎಲಿಯಾಸೆಂಬವನು ಅವರಲ್ಲಿ ಒಬ್ಬಳ ಬಳಿಗೆ ಯಾದರು ಕಳುಹಿಸಲ್ಪಡದೆ ಸಾರೆಪ್ತ ಯೆಂಬ ಗ್ರಾಮದಲ್ಲಿ ಒಬ್ಬ ವಿಧವೆ ಸ್ತ್ರೀಯ್ಯಾ ಬಳಿಗೆ ಕಳುಹಿಸಲ್ಪಟ್ಟನು। ಮತ್ತು ದೀರ್ಘದರ್ಶಿಯಾದ ಎಲಿಜೇಯು ಎಂಬವನ ಕಾಲದಲ್ಲಿ ಇಜ್ರಾಯೇಲಿನೊಳಗೆ ಕುಷ್ಟ ರೋಗಿಷ್ಟರು ಅನೇಕರಿದ್ದರು।

ಆದರೆ ಸೀರ್ಯ ದೇಶದವನಾದ ನಹುಮಾನೆಂಬವನು ವಿನಾ ಅವರೊಳಗೆ ಒಬ್ಬನಾದರೂ ಸ್ವಸ್ಥ ಪಡಲಿಲ್ಲವು। ಏನಂದರೆ ಸರ್ವೇಶ್ವರನು ಗರ್ವಿಷ್ಟರಿಗೂ ಅವಿಶ್ವಾಸಿಗಳಿಗೂ ಎದುರಿಸುತ್ತಾರೆ। ಆದರೆ ಮನೋದೈನ್ಯವೂ ವಿಶ್ವಾಸವೂ ಉಳ್ಳವರಿಗೆ ತಂಮ ಅನುಗ್ರಹಗಳಂನು ಕರುಣಿಸುತ್ತಾರೆ ಎಂಬದಾಗಿ ತೋರಿಸಿದ್ದರು। ಆಗಲು ಸಿನಗೋಗಿನಲ್ಲಿದ್ದಂಥ ಸರ್ವರು ಕೋಪವ್ಯಾಪಿತರಾಗಿ ಎದ್ದು ಸ್ವಾಮಿಗಳಂನು ಪಟ್ಟಣದ ಆಚೇಲಿ ನೂಕಿ ಅವರನ್ನು ದೊಬ್ಬಬೇಕೆಂಬ ಅತಿ ಕ್ರೋಧದಿಂದ ತಂಮ ಪಟ್ಟಣವು ಕಟ್ಟಿ ಇದ್ದಂಥ ಪರ್ವತದ ಶಿಖರದ ಪರಿಯಂತರಕ್ಕೂ ಅವರಂನು ಕರೆಕೊಂಡು ಹೋದರು। ಸ್ವಾಮಿಗಳೋ ಅವರ ದುರಾಲೋಚನೆಯಂನು ಚದರಿಸಿ ಅವರ ಮಧ್ಯದೊಳಗೆ ಹಾದು ಹೋದರು। ಮತ್ತೂ ತಂಮ ಕಿರು ಹಸ್ತದಿಂದ ಕೆಲವು ರೋಗಿಷ್ಟರಿಗೆ ಸ್ವಸ್ಥ ಪಡಿಸಿದದ್ದೇ ಹೊರತಾಗಿ ಆ ಸೀಮೆಯಲ್ಲಿ ಬೇರೊಂದು ಅದ್ಭುತವಂನಾದರು ಮಾಡದೆ ಅವರ ಅವಿಶ್ವಾಸದ ಮೇಲೆ ಆಶ್ಚರ್ಯ ಪಟ್ಟುಕೊಂಡು ಹೋದರು॥

ತರುವಾಯ ತಂಮ ಅಪೋಸ್ತಲರಂನು ಕರೆದು ಪಿಶಾಚಿಗಳಂನು ಹೊರಡಿಸುವದಾಗೂ ಸಮಸ್ತ ವ್ಯಾಧಿ ರೋಗಗಳಂನು ಪರಿಹರಿಸುವದಾಗೂ ದೇವರ ರಾಜ್ಯವಂನು ಪ್ರಸಂಗಿಸುವದಾಗೂ ಅವರಿಗೆ ಅಧಿಕಾರವಂನು ಕಟ್ಟಳೆ ಯಿಟ್ಟರು। ಆದರೆ ಅವರಂನು ಕಳುಹಿಸುವಾಗ ಆಜ್ಞಾಪಿಸಿ ಹೇಳಿದ್ದೇನಂದರೆ । ಪ್ರಯಾಣಕ್ಕೋಸ್ಕರ ಚೀಲವಂನಾದರೂ ಹಸಿಬೆಯಂನಾದರೂ ಜೋಡು ವುಡುಪುಗಳಂನಾದರೂ ತೆಗದುಕೊಳ್ಳದೆ ಸರ್ವ ಮೇಲು ಸ್ವರೂಪಿಯಾಗಿರುವ ಸರ್ವೇಶ್ವರನಿಂದ ಸಮಸ್ತವಂನು ನಂಬಿಕೊಂಡಿರಬೇಕೆಂದು ಅಪ್ಪಣೆ ಕೊಟ್ಟರು। ಮತ್ತು ಅವರ ಸಂಗಡ। ನಿಂಮ ನಡುಕಟ್ಟುಗಳಲ್ಲಿ ಚಿಂನವಂನಾದರೂ ಬೆಳ್ಳಿಯಂನಾದರೂ ಯಿರಿಸದೆ ಯಿರಿ। ಯಾಕೆಂದರೆ ಕೆಲಸದವನು ತಂನ ಆಹಾರಕ್ಕೆ ಪಾತ್ರನಾಗಿದ್ದಾನೆ। ಆದರೆ ಯಾವದೊಂದು ಪಟ್ಟಣಕ್ಕೆ ಪ್ರವೇಶಿಸಲಾಗಿ ಆ ಪಟ್ಟಣದಲ್ಲಿ ನೀತಿವಂತನ್ಯಾರೆಂದು ವಿಚಾರಿಸಿ ಅವನ ಬಳೀಲಿ ತಂಗಿರಿ । ನೀವು ಆ ಮನೆಯಂನು ಪ್ರವೇಶಿಸುವಾಗ ಅದಕ್ಕೆ ಸಮಾಧಾನವುಂಟಾಗಲಿ ಎಂದು ಹೇಳಿರಿ। ಆ ಮನೆಯ ಜನರು ಆಪ್ತ

ರಾದರೆ ನಿಂಮ ಸಮಾಧಾನವು ಅವರ ಮೇಲೆ ಬರುವದು। ಆದರೆ ಅಪಾತ್ರ ರಾದರೆ ನಿಂಮ ಸಮಾಧಾನವು ನಿಂಮ ಬಳಿಗೆ ತಿರಿಗಿ ಬರುವದು ಮತ್ತು ನೀವು ಅವರಿಗೆ ಕೋರಿದ ಪರಿಣಾಮವು ನಿಂಮ ತಲೆಯ ಮೇಲೆ ಮರುಳುವದು। ನಿಂಮಂನು ಅಂಗೀಕರಿಸುವವನು ನಂಮಂನು ಅಂಗೀಕರಿಸುತ್ತಾನೆ। ಮತ್ತು ನಂಮ ಶಿಷ್ಯನೆಂದು ಯೀ ಚಿಕ್ಕವರೊಳಗೊಬ್ಬನಿಗೆ ಒಂದು ಪಾತ್ರೆ ನೀರಂನು ಕೊಡುವಂಥವನ್ಯಾವನೋ ಅವನು ತಂನ ಪ್ರತಿಫಲವನ್ನು ಹೋಗಲಾಡಿಸಿಕೊಳ್ಳನು। ಆದರೆ ನಿಂಮಂನು ಅಂಗೀಕರಿಸದೆ ನಿಂಮ ವಾಕ್ಯಗಳಂನು ಯಾರು ಕೇಳ ಒಲ್ಲದೆ ಯಿರುವರೋ ಅಂಥವರ ಮನೆಯಂನೂ ಅಲ್ಲವೆ ಆ ಪಟ್ಟಣವಂನೂ ಬಿಟ್ಟು ಹೊರಟು ನಿಂಮ ಕಾಲುಗಳ ಧೂಳಂನು ಉದರಿಸಿರಿ। ನಿಶ್ಚಯವಾಗಿ ನಿಮಗೆ ಹೇಳುತ್ತೇನೆ ನ್ಯಾಯ ನಿರ್ಣಯದ ದಿನದಲ್ಲಿ ಸೊದೋಮ್ ಗೊಮೋರ್ ಎಂಬ ಪಟ್ಟಣಗಳಿಗಿಂತಾ ಅವರು ಅಧಿಕವಾಗಿ ಶಿಕ್ಷಿಸಲ್ಪಡುವರೆಂದು ಪಾಲಿಸಿದರು॥

ಮೊದಲನೇ ಸಾರಿ ದೇವ ವಾಕ್ಯವಂನು ಬೋಧಿಸ ತಂಮ ಅಪೋಸ್ತಲರಂನು ಸ್ವಾಮಿಗಳು ಕಳುಹಿಸುವಾಗ ಅವರಿಗೆ ಪಾಲಿಸಿದಂಥ ಬುದ್ಧಿಮತಿಗಳು ಆಗ್ಯೆ ಸಾಕಾಗಿದ್ದವು। ಆದರೆ ತಂಮ ಆರೋಹಣದ ತರುವಾಯ ಅಪೋಸ್ತಲರು ಜಗತ್ತಿನಲ್ಲಿ ಚದರಿ ಸುಖ ವರ್ತಮಾನವಂನು ಸಾರಿ ಹೇಳುವದರಿಂದ ಅನುಭವಿಸುವದಕ್ಕಿದ್ದ ಅಧಿಕವಾದ ಹಿಂಸೆ ಬಾಧೆಗಳು ಮುಂತಿಳಿಸುವದಾಗೆ ಈ ಉತ್ತಮ ವಾಕ್ಯಗಳಂನು ಇಂನೂ ಅವರಿಗೆ ಹೇಳಿದರು ಯಾವವಂದರೆ। ಇಗೋ ತೋಳಗಳ ಮಧ್ಯದಲ್ಲಿ ಕುರಿಗಳದಾಗೆ ನಿಮ್ಮನ್ನು ಕಳುಹಿಸುತ್ತೇನೆ ಹೀಗಿದ್ದು ಸರ್ಪಗಳೋಪಾದಿಯಲ್ಲಿ ವಿವೇಕಸ್ತರಾಗಿಯೂ ಪಾರಿವಾಳದ ಹಕ್ಕಿಗಳೋಪಾದಿಯಲ್ಲಿ ನಿಷ್ಕಪಟಸ್ತರಾಗಿಯೂ ಇರ್ರಿ। ಆದರೆ ಮನುಷ್ಯರ ಮೇಲೆ ಎಚ್ಚರಿಕೆಯಾಗಿರಿ ಯಾಕೆಂದರೆ ಇಗೋ ಅವರು ನಿಂಮಂನು ಹಿಡಿದು ತಂಮ ಸಭೆಗಳಲ್ಲಿ ನಿಲ್ಲಿಸಿ ಚಳಕುವರು। ಮತ್ತು ನೀವು ನಂಮಂನೂ ನಂಮ ಬೋಧನೆಯಂನೂ ಕುರಿತು ಸಾಕ್ಷಿ ಕೊಡುವದಕ್ಕೆ ರಾಜರುಗಳ ಮುಂದೆಯೂ ಪ್ರಭುಗಳ ಮುಂದೆಯೂ ತರಕೊಂಡು ಹೋಗಲ್ಪಡುವಿರಿ। ಆದರೆ ಅವರು ನಿಂಮಂನು ಹಿಡಿಯುವಾಗ ಅವರ ಮುಂದೆ

ಹ್ಯಾಗೆ ಪ್ರತ್ಯುತ್ತರ ಕೊಡುವೆ ಎಂದು ನೀವು ಚಿಂತೆ ಪಡ ಬ್ಯಾಡಿರಿ। ಏನಂದರೆ ನೀವು ಹೇಳಬೇಕಾದದ್ದು ಏನೋ ಆ ತರುಣದಲ್ಲಿ ನಿಮಗೆ ಕೊಡಲ್ಪಡುವದು। ಮಾತಾಡ ಹೋಗುವಂಥವರು ನೀವಲ್ಲ। ಆದರೆ ನಿಂಮಲ್ಲಿ ಮಾತಾಡುವಂಥವರು ನಿಂಮ ಪಿತನಾದವರ ಸ್ಪಿರಿತುಸಾಂಕ್ತುವೇ ಹೇಗಿದ್ದು ಆ ಹಿಂಸೆಗಳು ನಡಿಯುತ್ತಿರಲಾಗಿ ಸಹೋದರನು ಸಹೋದರನಂನು ಮಗನು ತಂದೆಯಂನು ಮರಣಕ್ಕೊಪ್ಪಿಸುವರು। ಮತ್ತು ಮಕ್ಕಳು ತಂದೆ ತಾಯಿಗಳ ಮೇಲೆ ತಿರಿಗ ಬಿದ್ದು ಅವರಂನು ಹತ್ಯ ಮಾಡುವರು। ನಂಮ ನಾಮದ ನಿಮಿತ್ಯಾರ್ಥವಾಗಿ ನೀವು ಸರ್ವರ ಹಗೆಗೆ ಗುರಿಯಾಗಿರುವಿರಿ। ಆದರೆ ಅಂತ್ಯ ಪರಿಯಂತರಕ್ಕು ನಿಲೆಗೊಂಡಿರುವವನು ಯಾವನೋ ಯಿವನೇ ರಕ್ಷಣ್ಯ ಹೊಂದುವನು। ಮತ್ತು ವೊಂದು ಪಟ್ಣದಲ್ಲಿ ನಿಂಮಂನು ಹಿಂಸೆ ಪಡಿಸುವಾಗ ಮತ್ತೊಂದು ಪಟ್ಣಕ್ಕೆ ವೋಡಿ ಹೋಗಿರಿ। ನಿಶ್ಚಯವಾಗಿ ನಿಮಗೆ ಹೇಳುತ್ತೇವೆ ಶಿಷ್ಯನು ಉಪಾಧ್ಯಾಯನಿಗಿಂತಾ ದೊಡ್ಡವನಲ್ಲವು। ಭೃತ್ಯನೂ ತಂನ ಯಜಮಾನನಿಗಿಂತಾ ಶ್ರೇಷ್ಟನಲ್ಲವು। ನರಮಕ್ಕಳು ನಂಮಂನು ಪೀಡಿಸಿದ ಮೇರೆಗೆ ನಿಂಮಂನು ಸಹಾ ಪೀಡಿಸುವರು। ಮನೆ ಯಜಮಾನನಂನು ಪಿಶಾಚಿ ಎಂದು ಹೇಳಿದ ಮೇರೆಗೆ ಆತನ ಮನೆಯವರಂನು ಎಷ್ಟಧಿಕವಾಗಿ ಪಿಶಾಚಿಗಳೆಂದು ಕರೆಯುವರು। ಆದಾಗ್ಯೂ ಅವರಿಗೆ ಅಂಜದೆ ನಂಮ ಬೋಧನೆಯಂನು ದೃಢವಾಗಿ ಪ್ರಸಂಗಿಸಿರಿ। ಕತ್ತಲಲ್ಲಿ ನಿಮಗೆ ನಾವು ಹೇಳುವಂಥಾದ್ದು ಬೆಳಕಿನಲ್ಲಿ ಹೇಳಿರಿ। ಮತ್ತು ಕಿವಿಗಳಲ್ಲಿ ನಿಮಗೆ ಹೇಳಲ್ಪಟ್ಟದ್ದು ಮಾಳಿಗೆಗಳ ಮೇಲೆ ಪ್ರಸಿದ್ಧಿ ಮಾಡಿರಿ ಮರಳಿ ನಿಮಗೆ ಹೇಳುತ್ತೇವೆ ಶರೀರವಂನು ಕೊಂದಾರುವಂಥವರಿಗೆ ಅಂಜ ಬ್ಯಾಡಿರಿ। ಯಾಕೆಂದರೆ ಅವರು ಆತ್ಮವಂನು ಹತ್ಯ ಮಾಡಲಾರರು। ಆದರೆ ಶರೀರವನ್ನೂ ಆತ್ಮವಂನೂ ನರಕದಲ್ಲಿ ದೊಬ್ಬಲಾಪುವಂಥಾ ದೇವರಿಗೆ ಅಂಜಿಕೊಳ್ಳಿರಿ। ಏನಂದರೆ ಸರ್ವೇಶ್ವರನ ಅಪ್ಪಣೆ ಯಾದರೆ ವಿನಾ ಮನುಷ್ಯನ ದುಷ್ಟತನವು ನಿಮಗೆ ಕೇಡು ಮಾಡ ಕೂಡದು। ಒಂದು ದುಡ್ಡಿಗೆ ಎರಡು ಹಕ್ಕಿಗಳಂನು ಮಾರುತ್ತಾರಲ್ಲವೇ? ನಿಂಮ ಪಿತನಾದವರ ಅನುಮತಿಯಿಲ್ಲದೆ ಅವುಗಳೊಳೊಂದಾದರೂ ನೆಲದ ಮೇಲೆ ಬೀಳದು। ಮತ್ತು

ನಿಂಮ ತಲೇ ಕೂದಲುಗಳ ಲೆಖ್ಖ ಸರ್ವೇಶ್ವರನಿಂದ ಮಾಡಲ್ಪಟ್ಟದೆ ಹಾಗಾದರೆ ನೀವು ಭಯ ಪಡಬ್ಯಾಡಿರಿ। ಅವರ ಸಂನಿಧಾನದಲ್ಲಿ ನೀವು ಅನೇಕ ಹಕ್ಕಿಗಳಿಗಿಂತಾ ಅಧಿಕ ಬೆಲೆಯುಳ್ಳವರಾಗಿದ್ದೀರಿ। ಆದ್ದರಿಂದ ಮನುಷ್ಯರ ಮುಂದೆ ನಂಮಂನು ವಿಶ್ವಾಸಿಸಿ ಮೆಚ್ಚುವವನು ಯಾವನೋ ಪರಲೋಕದಲ್ಲಿರುವ ನಂಮ ಪಿತನಾದವರ ಮುಂದೆಯೂ ನಾವು ಅವಂನ ಅಂಗೀಕರಿಸುವೆವು। ಆದರೆ ನಂಮ ಮೇಲೆ ಆಗಲಿ ನಂಮ ಬೋಧನೆಯ ಮೇಲೆ ಆಗಲಿ ಲಜ್ಜೆ ಪಡುವಂಥವನು ಯಾವನೋ ಪರಲೋಕದಲ್ಲಿರುವಂಥ ನಂಮ ತಂದೆಯಾದವರ ಮುಂದೆ ನಾವು ಅವಂನ ಹೇಳಿ ಬಿಡುವೆವು। ಮತ್ತು ನಿಂಮ ತಂದೆ ತಾಯಿಗಳ ಮೇಲೆಯೂ ಬಂಧು ಮಿತ್ರರ ಮೇಲೆಯೂ ಹೆಚ್ಚಾದ ಪ್ರೀತಿ ಯಿಡದಹಾಗೆ ನೋಡಿರಿ । ಯೇನಂದರೆ ಮನುಷ್ಯನ ಮನೆಯವರು ಅವನಿಗೆ ವೈರಿಗಳಾಗಿದ್ದಾರೆ । ಮತ್ತು ತಂದೆಯಂನಾಗಲಿ ತಾಯಂನಾಗಲಿ ಕುಮಾರಂನಾಗಲಿ ಮಗಳಂನಾಗಲಿ ನಮಗಿಂತಾ ಹೆಚ್ಚಾಗಿ ಸ್ನೇಹಿಸುವಂಥವನು ನಮಗೆ ಯುಕ್ತನಲ್ಲವು। ತಂನ ಶಿಲುಬೆ ಹೊತ್ತುಕೊಂಡು ನಂಮಂನು ಹಿಂಬಾಲಿಸದೆ ಹೋಗುವವನು ನಮಗೆ ಯೋಗ್ಯನಲ್ಲ। ನಂಮಂನು ಬೊಂಕಿದ್ದರಿಂದ ತಂನ ಜೀವ ಕಾಪಾಡುವಂಥವನ್ಯಾವನೋ ಅವನು ಅದಂನು ಹೋಗಲಾಡಿಸುವನು। ನಂಮ ನಿಮಿತ್ತವಾಗಿ ತಂನ ಜೀವವಂನು ಸಡ್ಡೆ ಮಾಡದೆ ನಷ್ಟ ಪಡುವವನು ಅದಂನು ಕಾಪಾಡಿಕೊಳ್ಳುವನು ಹಿಂದು ಪಾಲಿಸಿದರು। ಸ್ವಾಮಿಗಳು ಯೀ ಪ್ರಸಂಗವಂನು ಹೇಳಿ ತೀರಿಸುವಾಗ ಅಪೋಸ್ತಲರು ಹೊರಟು ಹಳ್ಳಿಪಳ್ಳಿಗಳಂನು ಸುತ್ತಿ ಸಂಚರಿಸುತಾ ಪಶ್ಚಾತ್ತಾಪ ಪಡುವಹಾಗೆ ಸರ್ವರಿಗೂ ಬೋಧಿಸುತ್ತಿದ್ದರು। ಮತ್ತಾ ಅನೇಕ ಪಿಶಾಚಿಗಳಂನು ಹೊರಡಿಸುತ್ತಾ ಅನೇಕ ರೋಗಿಷ್ಟರಂನು ಎಂಣೆಯಿಂದ ತೇಪಿಸಿ ಸ್ವಸ್ಥ ಪಡಿಸುತ್ತಿದ್ದರು॥

ಆ ಕಾಲದಲ್ಲಿ ಘೋರಿಯಾದ ಹೆರೋದೇಸೆಂಬವನು ತಂನ ಒಡ್ಡಂತಿಯ ದಿವಸದಲ್ಲಿ ಗಲಿಲೆಯ ದೇಶದ ಅಧಿಪತಿಗಳಿಗೂ ಪ್ರಭುಗಳಿಗೂ ಔತನವಂನು ಮಾಡಿಸಿದನು। ಆಗಲು ರಾಯನು ಯಿಟ್ಟುಕೊಂಡವಳಾದ ಹೆರೊದಿಯಾಸೆಂಬವಳ ಮಗಳು ಅವರ ಮುಂದೆ ಕುಣಿದಾಡುವಹಾಗೆ ಅಲ್ಲಿಗೆ

ప్రవేశిసిదళు। అవళు కుణిదాడువాగ ఆదద్దేనందరె। హెరొదేసెంబవనిగూ యివన సంగడ పంగ్తియల్లిద్దంథవరిగూ ప్రియవాగిరలాగి రాయను ఆ కుడిగియంను నోడి నీను కోరికొళ్ళువదంను కేళికో మత్తు నంమ రాజ్యద అర్ధ భాగవ కేళిద్దాగ్యూ అదంను మొదలాగి నినగె కొడువెనెందను। మత్తు యంథా వాగ్దత్తవంను నెరవేరిసువెనెంత సత్య ప్రమాణదింద సాధిసి హేళిదను। ఆగలు ఆ కుడిగి హొరటు తంన తాయియ బళిగె బందు అవళ నోడి తాను ఏను కేళ బేకెంత బెసగొండళు। ఆదక్కవళ తాయి ప్రత్యుత్తరవాగి స్నానికనాద జొవన్నేసన తలెయంను హొర్తు మత్తేను కేళ బ్యాడవెంధేళిదళు; హాగె అవళు త్వరెయాగి రాయన సంనిధిగె మరళి బందు అవన సంగడ। స్నానికనాద జొవన్నేసన శిరస్సంను తట్టెయల్లిట్టు ననగె శీఘ్రవాగి ఒప్పిసువహాగె కోరికొళ్ళుత్తేనె యెందళు। ఇదంను కేళి రాయను ఖిన్నవాదను। ఆదరె తాను కొట్ట భాషెయ నిమిత్తవాగియూ తన సంగడ పంగ్తియల్లి కుళితుకొండిద్దంథవర నిమిత్తవాగియూ అదంను ఉదాశె మాడకొల్లదె హోదను। ఆదకారణ హెరొదేసెంబవను కొబ్బ భంటినంను కళుహిసి తరెమనెయల్లి హాకల్పట్టంథా పరిశుద్ధనాద జొవన్నేసన తలెయంను హొయిసిదను। ఆ భంటను తిరిగి బందు ఆ నీతివంతర తలెయంను ఆ కుడిగిగె తందు కొట్టను। ఆ కుడిగి తలెయంను తాయిగె తందు కొట్టళు ఈ సంగతియంను కేళిద అవర శిష్యరు బందు అవర ప్రేతవంను హొత్తుకొండు హోగి అడక మాడిదరు కెలవు దివసగళాద తరువాయ హెరొదేసెంబవను దివ్య జేసునాథర కీర్తియంనూ యివరింద ఆగుత్తిద్దంథా సుక్రియగళంనూ కేళిదను। ఆదరె కెలవరు జొవన్నేసను మృతవాదవరొళగింద యెద్దిద్దానెంబదాగి హేళువదరిందలూ కెలవరు యెలియాసెంబవరు కాణిసిదరెందూ మత్తు కెలవరు పూర్వ దీర్ఘదర్శి

